# ಯಳಂದೂರಿನ ಜಾನಪದೀಯ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ನಿಬಂಧಕಾರರು

ಹೆಚ್.ಎಸ್.ಪದ್ಮ
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಆರ್.ವಿ.ಎಸ್.ಸುಂದರಂ
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - ೫೭೦ ೦೦೬



ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೮-೦೯

# ಯಳಂದೂರಿನ ಜಾನಪದೀಯ ಅಧ್ಯಯನ

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

**ನಿಬಂಧಕಾರರು**

**ಹೆಚ್.ಎಸ್.ಪದ್ಮ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



**ಮಾರ್ಗದರ್ಶಕರು**

**ಡಾ. ಆರ್.ವಿ.ಎಸ್.ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು - ೫೭೦ ೦೦೬



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**೨೦೦೮-೦೯**

## ದೃಢೀಕರಣ ಪತ್ರ

೨೦೦೮-೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVT MKS - ೦೦೩೧೭೮ರ ವಿದ್ಯಾರ್ಥಿನಿಯಾದ ಹೆಚ್.ಎಸ್. ಪದ್ಮ ಎಂ.ಫಿಲ್. ಪರೀಕ್ಷೆಯ ಅಂಗವಾಗಿ 'ಯಳಂದೂರಿನ ಜಾನಪದೀಯ ಅಧ್ಯಯನ' ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮೋ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯದಲ್ಲಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೫-೮-೨೦೦೯
ಸ್ಥಳ : ಮೈಸೂರು.

ಆರ್ವಿಎಸ್. ಸುಂದರಂ
**ಡಾ. ಆರ್. ವಿ. ಎಸ್. ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು ಮತ್ತು ನಿರ್ದೇಶಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಅಭ್ಯರ್ಥಿಯ ಘೋಷಣಾಪತ್ರ

**"ಯಳಂದೂರಿನ ಜಾನಪದೀಯ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTMKS - 00317ರ ವಿದ್ಯಾರ್ಥಿನಿಯಾದ ನಾನು ೨೦೦೮-೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಆರ್.ವಿ.ಎಸ್.ಸುಂದರಂ** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು

ದಿನಾಂಕ : ೧೨-೮-೨೦೦೮

**(ಹೆಚ್.ಎಸ್.ಪದ್ಮ)**

ಸಿ೦೦೮-೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿನಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

# ಪ ರಿ ವಿ ಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಿಂಚಿನಂತೆ ವೇಗವಾಗಿ ಚಲಿಸುತ್ತಿರುವ ಈ ಇಪ್ಪತ್ತೊಂದನೇ ಶತಮಾನದಲ್ಲಿ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಗಳಿಂದ ಅನಾದಿ ಕಾಲದಿಂದಲೂ ತಾಯಿ ಬೇರಿನಂತೆ ಬೆಳೆದು ಬಂದಿರುವ ಪ್ರಾದೇಶಿಕ ಜಾನಪದ ಮರೆಯಾಗಿ ಹೊಸದೊಂದು ನಾಗರಿಕತೆ ಪ್ರಬಲವಾಗುತ್ತಿದೆ. 'ಜನವಾಣಿ ಬೇರು ಕವಿವಾಣಿ ಹೂವು' ಎಂಬುದು ಭಾರತದ ವಿಷಯದಲ್ಲಿ ಇನ್ನೂ ಜೀವಂತ ಪರಿಕಲ್ಪನೆಯಾಗಿರುವುದರಿಂದ ಪ್ರಕೃತ ಅಧ್ಯಯನ ಸಾಧ್ಯವಾಗಿದೆ.

ಜಾನಪದ ಎಂಬುದು ಒಂದು ವಿಶಾಲವಾದ ಜ್ಞಾನಕ್ಷೇತ್ರ. ಅದರಲ್ಲಿ ಯಾವುದೇ ಒಂದು ಜನಸಮುದಾಯದಲ್ಲಿನ ಜೀವನ ಪದ್ಧತಿ, ಆಚರಣೆ, ನಂಬಿಕೆ, ಸಂಪ್ರದಾಯಗಳು ಸೇರಿದಂತೆ ಅಲ್ಲಿನ ಆಟ, ಅಡುಗೆ, ಮೌಖಿಕ ಸಾಹಿತ್ಯ, ಕರಕುಶಲ ಕಲೆ ವಸ್ತುಗಳೆಲ್ಲ ಸೇರುತ್ತವೆ. ಭಾಷೆಗೆ ಲಿಪಿ ಕಾಣಿಸಿಕೊಳ್ಳದ ಪೂರ್ವಕಾಲದಲ್ಲಿ ಮಾನವ ಸಮಾಜದ ಎಲ್ಲಾ ವರ್ತನೆಗಳು ಮೌಖಿಕವಾಗಿಯೇ ಅಭಿವ್ಯಕ್ತವಾಗುತ್ತಿದ್ದವು. ಆದರೆ ಭಾಷೆಗೆ ಲಿಪಿ ಬಂದ ಮೇಲೆ ಸಮಾಜದಲ್ಲಿ ತೀವ್ರತರ ಬದಲಾವಣೆಗಳಾದವು. ಇಂತಹ ಬದಲಾವಣೆಗಳ ಹಿನ್ನೆಲೆಯಲ್ಲಿ 'ಯಳಂದೂರಿನ ಜಾನಪದೀಯ ಅಧ್ಯಯನ' ಎಂಬ ವಿಷಯವನ್ನು ನಿಬಂಧದ ರಚನೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಜಾನಪದದ ಆಕರಗಳನ್ನು ಸಂಗ್ರಹಿಸುವ ನಿಟ್ಟಿನಲ್ಲಿ ಸಾಕಷ್ಟು ಪ್ರಯತ್ನಗಳು ನಡೆದಿವೆ. ಇನ್ನು ಮುಂದೆಯೂ ಇಂತಹವು ನಡೆಯಬೇಕು. ಆದ್ದರಿಂದ ಈ ವಿಷಯದ ಆಯ್ಕೆ ಪ್ರಸ್ತುತವೆನಿಸಿದೆ.

ಚಾಮರಾಜನಗರ ಜಿಲ್ಲೆಯ ಅತಿ ಸಣ್ಣ ತಾಲ್ಲೂಕಿನ ಕೇಂದ್ರವಾದ ಯಳಂದೂರಿನ ಬಗ್ಗೆ ಜಾನಪದ ಸಂಬಂಧವಾದ ಮಾಹಿತಿಯನ್ನು ನೀಡುವುದೇ ಈ ಪ್ರಬಂಧದ ಮುಖ್ಯೋದ್ದೇಶ. ಈ ತಾಲ್ಲೂಕು ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿ ಹಲವು ದಾಖಲೆಗಳನ್ನು ಸೃಷ್ಟಿಸಿದೆ. ಇಲ್ಲಿ ದೊರೆತಿರುವ ಶಾಸನಗಳು, ದೇವಾಲಯಗಳು, ಷಡಕ್ಷರಿಯ ಗದ್ದಿಗೆ ಇವೆಲ್ಲವು ಪ್ರಾಚೀನತೆಯ ಕುರುಹುಗಳಾಗಿವೆ.

ಸಂಸ್ಕೃತಿ, ಇತಿಹಾಸ, ಸಾಹಿತ್ಯ ಮುಂತಾದವನ್ನು ವಿವೇಚಿಸಲು ಹಲವು ಬಗೆಯ ಮಾಹಿತಿಗಳಿದ್ದರೂ ಮೌಖಿಕರೂಪದ ಮತ್ತು ರೂಢಿಮೂಲದ ಜಾನಪದ ಸಾಮಾನ್ಯ ಜನಜೀವನದ ಪ್ರತಿಬಿಂಬವಾಗಿರುತ್ತದೆ. ಆದ್ದರಿಂದ ಜನಜೀವನ ಪರಿಶೀಲನೆಯಲ್ಲಿ ಜಾನಪದದ ಆಕರ ಅತ್ಯಂತ ಮುಖ್ಯವಾಗುತ್ತದೆ.

ಜನಪದ ಸಾಹಿತ್ಯವನ್ನು ಹಾಡು, ಕಥೆ, ಒಗಟು, ಗಾದೆ ಎಂದು ವಿಭಾಗಿಸಿ, ಹಾಡುಗಳನ್ನು ಗಂಡಸರ ಹಾಡು ಮತ್ತು ಹೆಂಗಸರ ಹಾಡುಗಳೆಂದು ಪುನಃ ಎರಡು ವಿಭಾಗಗಳಾಗಿ ವಿಂಗಡಿಸಿ ಗಂಡಸರ ಹಾಡುಗಳಲ್ಲಿ ಲಾವಣಿ ವಿನೋದದ ಪದಗಳು, ವಿಶೇಷ ಪದಗಳೆಂದು, ಹೆಂಗಸರ ಹಾಡುಗಳಲ್ಲಿ ಬ್ರಾಹ್ಮಣಿ ಹಾಗೂ ಶೂದ್ರಾಣಿಯರ ಹಾಡುಗಳು ಸೇರಿಕೊಳ್ಳುತ್ತದೆ. ಹೀಗೆ ಮೌಖಿಕವಾಗಿಯೇ ಜನಪದರು ಸಾಹಿತ್ಯವನ್ನು ಪ್ರತಿಕ್ಷೇತ್ರದಲ್ಲೂ ವಿಸ್ತರಿಸಿಕೊಂಡಿರುವುದನ್ನು ನಾವು ಅಧ್ಯಯನದಿಂದ ತಿಳಿಯಬಹುದು.

ಜನಪದ ಸಾಹಿತ್ಯದಲ್ಲಿ ಗೀತೆಗೆ ಪ್ರಮುಖ ಸ್ಥಾನವಿದೆ ಎಂಬುದು ತಿಳಿಯುತ್ತದೆ. ಕಾರಣವೇನೆಂದರೆ ಜನಪದ ಗೀತೆಗಳು ನಿತ್ಯಜೀವನದ ಸಮಸ್ತ ಚಿತ್ರಣವನ್ನು ದಾಖಲಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಉತ್ತರದೇವಿ, ಈರೋಬಿ, ಭಾಗೀರಥಿಯ ವಿಚಾರವನ್ನು ಜನಪದ ಖಂಡ ಕಾವ್ಯದಲ್ಲಿ ಕಾಣುತ್ತೇವೆ. ಇವೆಲ್ಲ ಆಗಿನ ಜನರ ಜೀವನದ ವಿಚಾರವನ್ನು ತಿಳಿಸುತ್ತದೆ.

ಚಂಡಿ ಹಿಡಿದ ಮಗುವನ್ನು ಮಲಗಿಸಲು ಕೆಲವೊಂದು ಸಾರಿ ಅಜ್ಜಿ ತನ್ನ ಹಿಂದಿನ ನೆನಪನ್ನೋ ಅಥವಾ ಅನುಭವವನ್ನೋ ಕಥೆಮಾಡಿ ಸ್ವಾರಸ್ಯವಾಗಿ ಹೇಳುತ್ತಿದ್ದಳು. ಇವೆಲ್ಲ ಆ ಮಕ್ಕಳಿಗೆ ಮುಂದಿನ ಜೀವನವನ್ನು ಉತ್ತಮಪಡಿಸಿಕೊಳ್ಳಲು ಸಹಕಾರಿಯಾಗಿತ್ತು. ಅಷ್ಟೇ ಏಕೆ ಕೆಲವು ಕಥೆಗಳನ್ನು ಈಗ ನಾವು ಕೇಳಿದರೆ ನಮ್ಮ ಜೀವನವನ್ನು ಉತ್ತಮಪಡಿಸಿಕೊಳ್ಳುವ ವಿಚಾರವು ಅಡಗಿಕೊಂಡಿದೆ.

ದೈನಂದಿನ ಸಂದರ್ಭಗಳಲ್ಲಿ ಇಕ್ಕಟ್ಟುಗಳು ತಲೆದೋರಿದಾಗ ಹಿರಿಯರು ಗಾದೆ ಮಾತುಗಳನ್ನು ಉದಾಹರಿಸಿ ಪರಿಸ್ಥಿತಿಯನ್ನು ತಿಳಿಗೊಳಿಸುತ್ತಿದ್ದರು ಈ ಭಾಗದ ಜನ.

ವ್ಯಕ್ತಿ ಸೋಮಾರಿಯಾಗಿ ಕಾಲ ಕಳೆಯುತ್ತಿದ್ದರೆ ಆತನಿಗೆ ಹಿರಿಯರು ಕೆಲಸ ಮಾಡಲು ಉತ್ತೇಜನ ಕೊಡಬೇಕಾದಾಗ ಈ ಮಾತನ್ನು ಹೇಳಿ ಆತನ ಸೋಮಾರಿ ತನವನ್ನು ಒಳ್ಳೆಯ ತನದಿಂದ ತೊಡೆದುಹಾಕಲು ಪ್ರಯತ್ನಿಸುತ್ತಾರೆ. ಅದೇ 'ಕೈಕೆಸರಾದರೆ ಬಾಯಿ ಮೊಸರು' ಯಾವುದೇ ವ್ಯಕ್ತಿ ಅತಿ ಆಸೆಪಡಬಾರದು ಎಂಬುದಕ್ಕೆ 'ಹಾಸಿಗೆ ಇದ್ದಷ್ಟು ಕಾಲು ಚಾಚು' ಎನ್ನುವುದು.

ಜನಪದರಲ್ಲಿಯೇ ಯಾರೋ ತಪ್ಪು ಮಾಡಿದರೆ ಯಾರಿಗೋ ಶಿಕ್ಷೆಯಾಗುತ್ತಿತ್ತು ಎಂಬುದಕ್ಕೆ 'ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರು' ಕಳ್ಳನ ಬಾಯಲ್ಲಿ ಯಾವಾಗಲೂ ಸುಳ್ಳೇ ಬರುತ್ತವೆ ಎಂಬುದಕ್ಕೆ 'ಕಳ್ಳನಿಗೆ ಸುಳ್ಳೆ ಬಲ'.

ಗಾದೆ ಜನಪದರಲ್ಲಿ ವೇದಕ್ಕೆ ಸಮಾನವಾಗಿ ನಿಂತಿತ್ತು. ಇಂದಿಗೂ ಅವರು ಹೇಳಿದ ಗಾದೆಗಳನ್ನು ಸಮಯಕ್ಕೆ ತಕ್ಕಂತೆ ಬಳಸುತ್ತಾ ತಮ್ಮ ಬುದ್ದಿವಂತಿಕೆಯನ್ನು ತೋರಿಸಿಕೊಳ್ಳುತ್ತೇವೆ. ಹಾಗಾಗಿ ವೇದಗಳು ಅಕ್ಷರ ಬಲ್ಲವರಿಗೆ ಮಾತ್ರ ಸೀಮಿತ-ವಾಗಿದ್ದರೆ ಗಾದೆಗಳು ಎಲ್ಲರ ಸ್ವತ್ತಾಗಿತ್ತು.

ಹೀಗೆಯೇ ಒಗಟನ್ನು ಈ ಭಾಗದ ಜನರು ಪಂದ್ಯವಾಗಿ ಬಳಸಿಕೊಂಡು ಬುದ್ಧಿವಂತರನ್ನು ತೋರಿಸಿಕೊಡುತ್ತಿತ್ತು. ಯಳಂದೂರಿನ ಜನಪದರು ತಮ್ಮ ಬದುಕಿನುದ್ದಕ್ಕೂ ನಿಷ್ಠರಾಗಿ ಬಾಳಿಕೊಂಡು ಬಂದವರು. ಮಗು ಹುಟ್ಟಿದಾಗ ಆಚರಿಸುವ ಜನನ ಕರ್ಮಗಳಿಂದ ಹಿಡಿದು ಸತ್ತವರಿಗಾಗಿ ಇದ್ದವರು ತಲೆ ಬೋಳಿಸಿಕೊಂಡು ತಿಥಿಮಾಡುವವರೆಗೂ ಕಂಡುಬರುವ ವೈವಿಧ್ಯಮಯ ವಿಧಾನಗಳು ಆಚರಣೆಗಳನ್ನು ಇದರಲ್ಲಿ ತಿಳಿಸುವ ಪ್ರಯತ್ನ ಮಾಡಿದೆ.

ಹೀಗೆ ಜಾನಪದದ ವಿಚಾರವನ್ನು ಒಂದು ಕಡೆ ಕಲೆಹಾಕುತ್ತಾ ಬಂದರೆ ಮುಂದಿನ ಪೀಳಿಗೆಯ ಜನರಿಗೆ ಅವರ ಆಚಾರ–ವಿಚಾರಗಳು ಹೇಗಿತ್ತು ಎಂಬುದನ್ನು ತಿಳಿಯಲು ಸಹಾಯವಾಗುತ್ತದೆ. ಅಲ್ಲದೆ ಇಂತಹ ವಿಷಯದ ಆಯ್ಕೆಯಿಂದ ಬರಹಗಾರರು ಹೆಚ್ಚು ವಿಚಾರವನ್ನು ತಿಳಿಯಬಹುದು. ಈ ಊರು ಕೇವಲ ಮೂವತ್ಮೂರು ಹಳ್ಳಿಗಳನ್ನು ಪಡೆದಿದ್ದರು. ಸಾಂಸ್ಕೃತಿಕವಾಗಿ ಮತ್ತು ಜಾನಪದೀಯವಾಗಿ ತುಂಬಾ ಮುಂದುವರಿದಿದೆ. ಈ ಕಾಲ ಘಟ್ಟದಲ್ಲಿಯೂ ಯಳಂದೂರು ಜನರ ಆಚರಣೆ, ಸಂಪ್ರದಾಯಗಳು ಅಚ್ಚರಿ ಮೂಡಿಸುವಂತಾಗಿದೆ ಎಂಬುದನ್ನು ಅಧ್ಯಯನ ಮೂಲಕ ತಿಳಿಸಲು ಸಂತೋಷವಾಗುತ್ತದೆ.

ಈ ನಿಬಂಧದ ವ್ಯಾಪ್ತಿಯನ್ನು ಯಳಂದೂರಿಗೆ ಸೀಮಿತಗೊಳಿಸಿ ಈ ಕೆಳಗಿನಂತೆ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

೧. ಯಳಂದೂರಿನ ಭೌಗೋಳಿಕ ಹಿನ್ನೆಲೆ

೨. ಯಳಂದೂರಿನ ಇತಿಹಾಸ

೩. ಯಳಂದೂರಿನ ಮೌಖಿಕ ಜಾನಪದ

೪. ಯಳಂದೂರಿನ ಆಚಾರ ಮತ್ತು ಸಂಪ್ರದಾಯ

೫. ಯಳಂದೂರಿನ ಜಾನಪದೀಯ ಸ್ಥಿತ್ಯಂತರಗಳು

ಉಪಸಂಹಾರ

ವಕ್ತೃ ಪರಿಚಯ

ಗ್ರಂಥಸೂಚಿ

ಯಳಂದೂರು ತಾಲ್ಲೂಕಿನ ನಕ್ಷೆ

ಹೀಗೆ ವಿಂಗಡಿಸಿಕೊಂಡು ಅಧ್ಯಯನ ಕಾರ್ಯವನ್ನು ಕೈಗೊಂಡಿದೆ.

# ಅಧ್ಯಾಯ ೨

# ಯಳಂದೂರಿನ ಭೌಗೋಳಿಕ ಹಿನ್ನೆಲೆ

'ಕರ್ನಾಟಕ ಪೂರ್ವದ ಸೆರಗಿನಲ್ಲಿ ಬಿಳಿಗಿರಿಬನದ ತಪ್ಪಲಿನಲ್ಲಿರುವ ಯಳಂದೂರು ಹಿಂದೆ ಮೈಸೂರು ಸಂಸ್ಥಾನಕ್ಕೆ ಸೇರಿದ್ದ ಮೈಸೂರು ಜಿಲ್ಲೆಯ ಒಂದು ಪುಟ್ಟ ಸಂಪದ್ಭರಿತ ತಾಲ್ಲೂಕಾಗಿತ್ತು. ಕೇವಲ ೩೩ ಹಳ್ಳಿಗಳಿಂದ ಕೂಡಿದ ಈ ತಾಲ್ಲೂಕಿನ ಪ್ರತಿಯೊಂದು ಹಳ್ಳಿಯೂ ಕೆರೆಕಟ್ಟೆಗಳಿಂದ ಆವೃತವಾಗಿ ನೀರಾವರಿಗೆ ತುಂಬಾ ಅನುಕೂಲವಾಗಿತ್ತು. ಅಲ್ಲದೆ ಪಟ್ಟಣದ ಹೃದಯ ಭಾಗದಲ್ಲೇ ಸುವರ್ಣಾವತಿ ನದಿಯು ಹರಿಯುತ್ತಿದ್ದು ಈ ನದಿಯ ಎಡ ಬಲದಂಡೆಗಳಲ್ಲಿ ತೆಂಗು, ಬಾಳೆ, ಅಡಿಕೆ ತೋಟಗಳು ನದಿಯ ಉದ್ದಕ್ಕೂ ಕಂಗೊಳಿಸುತ್ತಿತ್ತು. ಅಲ್ಲದೆ ಯಳಂದೂರು ರೇಷ್ಮೆ ಬೆಳೆಗೂ ಪ್ರಸಿದ್ಧಿಯಾಗಿತ್ತು. ಇಲ್ಲಿಯ ಮಾಂಬಳ್ಳಿ ಎಂಬ ಗ್ರಾಮದ ಕಾರ್ಖಾನೆಯಲ್ಲಿ ತಯಾರಿಸುತ್ತಿದ್ದ ರೇಷ್ಮೆ ಬಟ್ಟೆಗೆ 'ಮಾಂಬಳ್ಳಿ ಸಿಲ್ಕ್' ಎಂದೇ ಪ್ರಸಿದ್ಧಿಯಾಗಿತ್ತು.

ಹಿಂದೆ ಈ ತಾಲ್ಲೂಕು ಜಹಗೀರ್‌ದಾರರ ಆಳ್ವಿಕೆಗೆ ಒಳಪಟ್ಟಿದ್ದು, ಸ್ವಾತಂತ್ರಾ ನಂತರ ಮೈಸೂರು ಸಂಸ್ಥಾನದ ಮೈಸೂರು ಜಿಲ್ಲೆಗೆ ಸೇರಿದ್ದು, ತದನಂತರ ಕರ್ನಾಟಕ ರಾಜ್ಯದಲ್ಲಿ ಜಿಲ್ಲೆಗಳ ಪುನರ್ವಿಂಗಡಣೆಯಾದಾಗ ಚಾಮರಾಜನಗರವೂ ಜಿಲ್ಲೆಯಾಗಿ ಮಾರ್ಪಟ್ಟು ೧೯೯೮-೯೯ರಲ್ಲಿ ಯಳಂದೂರು ತಾಲ್ಲೂಕು ಚಾಮರಾಜನಗರ ಜಿಲ್ಲೆಗೆ ಸೇರ್ಪಟ್ಟಿತು.

ಯಳಂದೂರು ತಾಲ್ಲೂಕಿನ ಉತ್ತರಕ್ಕೆ ಮತ್ತು ಪೂರ್ವಕ್ಕೆ ಕೊಳ್ಳೇಗಾಲ ತಾಲ್ಲೂಕು, ಪಶ್ಚಿಮ ಮತ್ತು ದಕ್ಷಿಣದಲ್ಲಿ ಚಾಮರಾಜನಗರ ತಾಲ್ಲೂಕು ಸುತ್ತುವರಿದಿದೆ. ಯಳಂದೂರು ತಾಲ್ಲೂಕಿನ ಹೋಬಳಿಗಳಲ್ಲಿ ಒಟ್ಟು ೩೩ ಗ್ರಾಮಗಳಿದ್ದು ೨೬೪.೭ ಚ.ಕಿ.ಮೀ. ವ್ಯಾಪಿಸಿದ್ದು ಅಪಾರವಾದ ಪ್ರಾಕೃತಿಕ ಸಂಪತ್ತನ್ನು ಹೊಂದಿದೆ.

ಈ ತಾಲ್ಲೂಕಿನ ಈಶಾನ್ಯ ಭಾಗಕ್ಕೆ ಕೊಳ್ಳೇಗಾಲ ತಾಲ್ಲೂಕು, ವಾಯುವ್ಯ ಭಾಗದಲ್ಲಿ ಚಾಮರಾಜನಗರ ತಾಲ್ಲೂಕು ಸುತ್ತುವರಿದಿವೆ. ಯಳಂದೂರು ತಾಲ್ಲೂಕಿನ ಪ್ರಮುಖ ಪ್ರೇಕ್ಷಣೀಯ ಸ್ಥಳ ಬಿಳಿಕಲ್ಲುಬೆಟ್ಟ, ಶ್ವೇತಾದ್ರಿ, ಬಿಳಿಗಿರಿ ಬೆಟ್ಟ ಎಂದೆಲ್ಲಾ ಖ್ಯಾತಿಯನ್ನು ಪಡೆದಿರುವ ಬಿಳಿಗಿರಿರಂಗನ ಬೆಟ್ಟ, ಈ ಬೆಟ್ಟವು ಯಳಂದೂರಿನಿಂದ ಸ್ವಲ್ಪ ಆಗ್ನೇಯಕ್ಕೆ ಸುಮಾರು ೧೫ ಕಿ.ಮೀ. ದೂರದಲ್ಲಿ ಇದೆ. ಈ ಬೆಟ್ಟದ ಮೇಲೆ ಬಿಳಿಗಿರಿ ರಂಗಸ್ವಾಮಿಯ ದೇವಾಲಯವಿದ್ದು ಇದೊಂದು ಮುಖ್ಯವಾದ ಪ್ರವಾಸಿ ತಾಣವಾಗಿದೆ.

ಈ ಊರಿನ ಒಳಭಾಗದಲ್ಲಿ ಅನೇಕ ದೇವಾಲಯಗಳು, ಷಡಕ್ಷರಿಯ ಗದ್ದಿಗೆ, ಜಹಗೀರ್‌ದಾರ್ ಬಂಗಲೆ, ಗ್ರಂಥಾಲಯ, ಆರೋಗ್ಯ ಕೇಂದ್ರಗಳು ಹಾಗೂ ಅನೇಕ ಶಾಲಾ ಕಾಲೇಜುಗಳಿವೆ. ಅಲ್ಲದೆ ಗ್ರಾಮದ ಆಗ್ನೇಯ ದಿಕ್ಕಿನಲ್ಲಿ

ಡಾ॥ ಸುದರ್ಶನ್‌ರವರು ಸ್ಥಾಪಿಸಿರುವ 'ಕರುಣಾ ಟ್ರಸ್ಟ್' ಕೇವಲ ಗಿರಿಜನರನ್ನು ಸಲಹುದಲ್ಲದೆ ಯಳಂದೂರು ತಾಲ್ಲೂಕಿನ ಜನತೆಗೆ ಹಲವಾರು ಸಹಾಯ ಸಹಕಾರಗಳನ್ನು ಮಾಡುವುದರ ಮೂಲಕ ತಾಲ್ಲೂಕಿನ ಏಳಿಗೆಗೆ ಸಹಕಾರಿಯಾಗಿದೆ.

ಈ ತಾಲ್ಲೂಕು ಹೆಚ್ಚಾಗಿ ಕಪ್ಪು ಮಣ್ಣಿನಿಂದ ಕೂಡಿದೆ. ಯಳಂದೂರಿನ ಭೌಗೋಳಿಕ ವಿಸ್ತೀರ್ಣ ೨೬.೪೭೩ ಹೆಕ್ಟೇರು ಮಾತ್ರ. ಈ ವಿಸ್ತೀರ್ಣ ಚಾಮರಾಜನಗರ ಜಿಲ್ಲೆಯ ಸುಮಾರು ಶೇಕಡ ೫ರಷ್ಟು, ಆದರೆ ಜನಸಂಖ್ಯೆ ಸು. ಶೇಕಡ ೮ ರಷ್ಟಿದೆ. ಅಂದರೆ ಇದೊಂದು ಜನಸಂಖ್ಯೆ ಸಾಂದ್ರತೆ ಜಾಸ್ತಿ ಇರುವ ತಾಲ್ಲೂಕು. ಅಲ್ಲದೆ ಚಾಮರಾಜನಗರದ ಬೇರೆ ತಾಲ್ಲೂಕುಗಳಿಗೆ ಹೋಲಿಸಿದರೆ ಇಲ್ಲಿ ಜನಸಂಖ್ಯೆಯ ಬೆಳವಣಗೆ ಕೂಡ ಜಾಸ್ತಿ. ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೮೦ರಷ್ಟು ಹಳ್ಳಿಗಳಲ್ಲಿಯೇ ವಾಸಮಾಡುವ ಈ ತಾಲ್ಲೂಕನ್ನು ಗ್ರಾಮೀಣ ತಾಲ್ಲೂಕೆಂದೇ ಕರೆಯಬಹುದು.

ಯಳಂದೂರು ತಾಲ್ಲೂಕಿನ ಹೆಚ್ಚಿನ ಪ್ರದೇಶ ಸಮತಟ್ಟಾಗಿದ್ದು ವ್ಯವಸಾಯ ಯೋಗ್ಯ ಮರಳುಮಿಶ್ರಿತ ಕೆಂಪು ಮಣ್ಣು ಮತ್ತು ಕಪ್ಪು ಮಣ್ಣಿನ ಭೂಪ್ರದೇಶವನ್ನು ಒಳಗೊಂಡಿದೆ. ವ್ಯವಸಾಯ ಇಲಾಖೆಯ ಸಮೀಕ್ಷೆಯಂತೆ ೮,೧೭೭ ಹೆಕ್ಟೇರ್ ಬಿತ್ತನೆಗೆ ಯೋಗ್ಯವಾದ ಭೂಮಿ ಇದ್ದು ಈ ಪ್ರದೇಶ ನೀರಾವರಿ ಆಶ್ರಯದಲ್ಲೂ, ೭.೫೨೨ ಹೆಕ್ಟೇರ್ ಪ್ರದೇಶ ಮುಂಗಾರು ಹಂಗಾಮಿನಲ್ಲಿ ಕಾಲುವೆ ಆಶ್ರಯದಲ್ಲೂ ಇದೆ. ೯೪೮ ಹೆಕ್ಟೇರ್ ನೀರಾವರಿ ಆಶ್ರಯದಲ್ಲಿ ಸಣ್ಣ ಕೆರೆಗಳಿಂದ ಬೇಸಾಯ ಸುಮಾರು ೫.೦೦೦ ಹೆಕ್ಟೇರಿಗೂ ಜಾಸ್ತಿ ಪ್ರದೇಶದಲ್ಲಿ ಭತ್ತ, ೨೦೦ ಹೆಕ್ಟೇರಿಗೂ ಜಾಸ್ತಿ ಪ್ರದೇಶದಲ್ಲಿ ರಾಗಿ, ೨೦೦೦ ಹೆಕ್ಟೇರಿಗೂ ಅಧಿಕ ಭೂ ಪ್ರದೇಶದ ಮುಖ್ಯ ಬೆಳೆಗಳಾದ ಕಬ್ಬು ಮತ್ತು ಹಿಪ್ಪುನೇರಳೆ ಬೆಳೆಗಳಾಗಿವೆ.

ಪೂರ್ವಕ್ಕೆ ಹಾಗೂ ದಕ್ಷಿಣಕ್ಕೆ ಬಿಳಿಗಿರಿರಂಗನ ಬೆಟ್ಟದ ಶ್ರೇಣಿ ಇದ್ದು ಇನ್ನುಳಿದ ಪ್ರದೇಶ ಸಮತಟ್ಟಾಗಿದೆ. ಈ ತಾಲ್ಲೂಕಿನ ದಕ್ಷಿಣ ಭಾಗಕ್ಕಿರುವ ಬಿಳಿಗಿರಿರಂಗನ ಬೆಟ್ಟದ ಸಾಲು ದಟ್ಟ ಕಾಡುಗಳಿಂದ ಕೂಡಿವೆ. ಉತ್ತರ ಭಾಗ ಸುವರ್ಣಾವತಿ ನದಿ ಮತ್ತು ಕೆರೆಗಳ ಪ್ರದೇಶವಾಗಿದೆ.

ಒಟ್ಟಿನಲ್ಲಿ ತಾಲ್ಲೂಕು ತಂಪಾದ ಹವಾಗುಣ ಹೊಂದಿದೆ. ವಾರ್ಷಿಕ ಮಳೆ ೭೭೯ ಮಿ.ಮೀ. ಸರಾಸರಿ ಈ ತಾಲ್ಲೂಕಿನಲ್ಲಿ ೭೭೬ ಮಿ.ಮೀ ಮಳೆ ಮತ್ತು ಇಲ್ಲಿ ೧೦,೨೭೭ ಹೆಕ್ಟೇರ್ ಕಾಡು ಪ್ರದೇಶವಿದ್ದು. ಈ ಕಾಡುಗಳು ಉತ್ತರ ದಕ್ಷಿಣವಾಗಿ ಹಬ್ಬಿವೆ. ಈ ಬೆಟ್ಟ ದಟ್ಟವಾದ ಕಾಡಿನಿಂದ ಆವೃತವಾಗಿದ್ದು ಅಮೂಲ್ಯವಾದ ತೇಗ, ಹೊನ್ನೆ, ಮತ್ತಿ, ಬೀಟೆ, ಕಲ್ಲುಬಾಗೆ, ಮುತ್ತುಗ ಮುಂತಾದ ಅಮೂಲ್ಯ ವೃಕ್ಷ ಸಂಪತ್ತಿನೊಂದಿಗೆ ವನೌಷಧಿಗಳಿಗೆ ಅಗತ್ಯವಾದ ಬಗೆಬಗೆಯ ಮೂಲಿಕೆಗಳು ಈ

ಕಾಡಿನಲ್ಲಿವೆ. ಆನೆ, ಕಾಡುಕೋಣ, ಜಿಂಕೆ, ಚಿರತೆ, ಕರಡಿ, ಕಾಡುಹಂದಿ ಮುಂತಾದವುಗಳ ಜೊತೆಗೆ ಅನೇಕ ಬಗೆಯ ಪಕ್ಷಿಗಳಿವೆ.

ಸುವರ್ಣಾವತಿ ನದಿಯು ಈ ತಾಲ್ಲೂಕಿನ ಅಂಬಳೆ ಗ್ರಾಮದ ಪಶ್ಚಿಮದಲ್ಲಿ ಪ್ರವೇಶಿಸಿ ನೈಋತ್ಯದಿಂದ ಯಳಂದೂರು ಮೂಲಕ ಈಶಾನ್ಯಾಭಿಮುಖವಾಗಿ ತಾಲ್ಲೂಕಿನಲ್ಲಿ ಹರಿದು ಅಗರ ಗ್ರಾಮದ ಈಶಾನ್ಯದಲ್ಲಿ ಕೊಳ್ಳೇಗಾಲ ತಾಲ್ಲೂಕನ್ನು ಪ್ರವೇಶಿಸುತ್ತದೆ. ಇಲ್ಲಿನ ಕೆರೆಗಳು ಭತ್ತ, ಕಬ್ಬು ಬೆಳೆಯುವ ಪ್ರದೇಶಕ್ಕೆ ಕಾರಣಗಳಾಗಿವೆ. ತೆಂಗು, ಅಡಿಕೆ, ವೀಳ್ಯದೆಲೆ, ಬಾಳೆ ಮುಂತಾದವು ಇತರ ಬೆಳೆಯಾಗಿದೆ. ಮಳೆ ಆಶ್ರಿತ ಪ್ರದೇಶಗಳಲ್ಲಿ ರಾಗಿ, ಜೋಳ ಬೆಳೆಯುತ್ತಾರೆ.

ಈ ತಾಲ್ಲೂಕಿನ ಅನೇಕ ಜಮೀನಿನಲ್ಲಿ ಬಹು ಬೆಲೆಬಾಳುವ ಕರಿಕಲ್ಲಿನ ನಿಧಿ ಇದೆ. ಇದನ್ನು ಸರಿಯಾಗಿ ಬಳಸಿಕೊಂಡಲ್ಲಿ ಅನೇಕ ಬಡ ಕುಟುಂಬಗಳು ಬಡತನ ರೇಖೆಗಿಂತ ಮೇಲ್ಮಟ್ಟಕ್ಕೆ ಬರುವುದರಲ್ಲಿ ಸಂಶಯವಿಲ್ಲ. ಯಳಂದೂರು ಮಾರ್ಗದಿಂದ ಹೋಗುವ ನಂಜನಗೂಡು–ಕೊಳ್ಳೇಗಾಲ ರಸ್ತೆ, ಚಾಮರಾಜನಗರ–ಯಳಂದೂರು ರಸ್ತೆ, ಯಳಂದೂರು–ಬಿಳಿಗಿರಿ ರಂಗನ ಬೆಟ್ಟದ ರಸ್ತೆ. ಇವು ತಾಲ್ಲೂಕಿನ ಮುಖ್ಯ ರಸ್ತೆಗಳು. ಯಳಂದೂರಿಗೆ ೧೯ ಕಿ.ಮೀ. ದೂರದಲ್ಲಿ ಚಾಮರಾಜನಗರದಲ್ಲಿ ರೈಲು ನಿಲ್ದಾಣವಿದೆ.

ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳೆಂದರೆ ಅಗರ, ಬಿಳಿಗಿರಿರಂಗನ ಬೆಟ್ಟ. ೧೮೦೭ನೇ ಇಸವಿಯಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಯಳಂದೂರು ತಾಲ್ಲೂಕನ್ನು ದಿವಾನ್ ಪೂರ್ಣಯ್ಯನವರಿಗೆ ಜಹಗೀರಾಗಿ ಕೊಟ್ಟರು. ಇನಾಂ ಪದ್ಧತಿ ಶಾಸನದ ಹಕ್ಕಿಗನುಗುಣವಾಗಿ ಈ ತಾಲ್ಲೂಕು ಸರ್ಕಾರದ ವಶಕ್ಕೆ ಸೇರಿತ್ತು.

೧೪೫೦ರಲ್ಲಿ ಸಿಂಗಿದೇವನೆಂಬುವರು ಗೌರೀಶ್ವರ ದೇವಾಲಯ ಕಟ್ಟಿಸಿದರೆಂಬ ಶಾಸನದಲ್ಲಿ "ಈ ಊರು ಪೂರ್ವಕ್ಕೆ ಶ್ವೇತಗಿರಿ ಆಗ್ನೇಯಕ್ಕೆ ಮಲ್ಲಿನಾಥಗಿರಿ, ದಕ್ಷಿಣಕ್ಕೆ ಸುರಗಿರಿ, ನೈರುತ್ಯ ದಿಕ್ಕಿನ ಶಂಭುಲಿಂಗನ ಗಿರಿ, ಉತ್ತರ ದಿಕ್ಕಿನ ಶ್ರೀಶೈಲ ಗಿರಿ, ಈಶಾನ್ಯ ದಿಕ್ಕಿನ ನಿರ್ಮಲ ಗಿರಿ – ಈ ಎಂಟು ಗಿರಿಗಳ ನಡುವೆ ಕಂಗೊಳಿಸಿದೆ" ಯಳಂದೂರು ಎಂದು ವರ್ಣಿಸಲಾಗಿದೆ.

**ಸುವರ್ಣಾವತಿ ಹೊಳೆ** – ನಾಗರೀಕರಣವನ್ನೊಳಗೊಂಡ ಪ್ರದೇಶವೊಂದರ ಆರ್ಥಿಕ, ಸಾಮಾಜಿಕ ಅಲ್ಲದೆ ಸಾಂಸ್ಕೃತಿಕ ಸ್ಥಿತಿಗತಿಗಳು ನಿರ್ಧಾರವಾಗುವುದು ಪ್ರದೇಶದಲ್ಲಿನ ಭೂಮಿಯ ಫಲವತ್ತತೆಯ ಮತ್ತು ಅದರ ಪ್ರಯೋಜನ ಅನುಕೂಲಗಳನ್ನು ಅವಲಂಬಿಸಿರುತ್ತದೆ. ಅದೇ ರೀತಿ ತಾಲ್ಲೂಕಿನ ಭೂಮಿಯ ವ್ಯವಸಾಯಕ್ಕೆ ನೀರೊದಗಿಸುವಲ್ಲಿ ಕೆರೆಗಳು ಹೆಚ್ಚು ಪ್ರಾಮುಖ್ಯತೆಗಳಿಸಿದ್ದರೂ ಅನೇಕ ಜನಸಾಮಾನ್ಯರಿಗೆ ಅದು ಉಪಯೋಗಿಸಲ್ಪಟ್ಟು ಮತ್ತು ಹಲವರಿಗೆ ಅವುಗಳ ಪ್ರಯೋಜನಗಳು ಲಭ್ಯವಾಗದೆ

ಇರುವಂತಹ ಪರಿಸ್ಥಿತಿಯೂ ಉಂಟು ಅಂತಹ ಪ್ರದೇಶಗಳಿಗೆ ಈ ಭಾಗದಲ್ಲಿ ಹರಿದು ಬರುವಂತಹ ಸುವರ್ಣಾವತಿ ನದಿ ತನ್ನ ತಾಯ್ತನದ ಹಾರೈಕೆಯಿಂದ ಪ್ರದೇಶವನ್ನು ಸಮೃದ್ಧಗೊಳಿಸಿದೆ.

ಸುವರ್ಣಾವತಿ, ಕಾವೇರಿ ನದಿಯ ಉಪನದಿ. ಇದನ್ನು ತಾಲ್ಲೂಕಿನ 'ಜೀವನದಿ' ಎಂದು ಇತ್ತೀಚೆಗೆ ಕರೆಯುತ್ತಿದ್ದಾರೆ. ಇದರ ಮತ್ತೊಂದು ಹೆಸರು 'ಹೊನ್ನುಹೊಳೆ'. ಇದು ಗೆಜ್ಜಲ ಹಟ್ಟಿ ಕಣಿವೆಯಲ್ಲಿ ಹುಟ್ಟುತ್ತದೆ. ಯಳಂದೂರಿನ ಗೌರೀಶ್ವರ ದೇವಾಲಯದ ಪ್ರಾಕಾರದ ದಕ್ಷಿಣ ಕಡೆ ಮಂಟಪದಲ್ಲಿರುವ ಶಾಸನದ ಪ್ರಕಾರ ಇಲ್ಲಿ ಕಪಿಲ ಋಷೀಶ್ವರನು ತಪಸ್ಸು ಮಾಡುತ್ತದ್ದರೆಂದು ದೇವ ಗಂಗಾಜಲ ಆತನ ಕಮಂಡಲದಲ್ಲಿ ಇತ್ತೆಂದೂ ಅಲ್ಲಿಗೆ ಬಂದ ನಂದೀಶ್ವರನಿಗೆ ಕಮಂಡಲವನ್ನು ನೀಡಿ ಆ ಉದಕ ಪ್ರೋಕ್ಷಣೆ ಮಾಡುವಂತೆ ಆಜ್ಞಾಪಿಸಲಾಗಿ ಆತ ಅದರಂತೆ ಉತ್ತರಾಭಿಮುಖವಾಗಿ ಈ ಕಮಂಡಲದ ಉದಕವನ್ನು ಪ್ರೋಕ್ಷಣೆ ಮಾಡಿದ ಫಲದಿಂದ ನದಿಯಾಗಿ ಮಾರ್ಪಟ್ಟಿತ್ತೆಂದೂ, ಅದಕ್ಕೆ ಸುವರ್ಣಾವತಿ ಎಂಬ ನಾಮಧೇಯವೂ ಕೂಡ ಆತನಿಂದಲೇ ದೊರಕಿತೆಂಬುದು ಐತಿಹಾಸಿಕ ಹಿನ್ನೆಲೆ.

ಗೆಜ್ಜಲ ಹಟ್ಟಿ ಕಣಿವೆಯಲ್ಲಿ ಹುಟ್ಟಿದ ನಂತರ ಉತ್ತರಾಭಿಮುಖವಾಗಿ ಹರಿಯುವ ನದಿ ನೀರೆ, ದುರ್ಗಹಳ್ಳಿ ಅತ್ತಿಖಾನೆ ಎಸ್ಟೇಟ್ ಪ್ರದೇಶದಲ್ಲಿ ಹುಟ್ಟಿ ಸುಮಾರು ೩೨ ಕಿ.ಮೀ. ಹರಿಯುತ್ತದೆ. ಇವೆರಡೂ ಬೂದಿಪಡಗದ ಹತ್ತಿರ ಸಂಗಮವಾಗಿ ಸುವರ್ಣಾವತಿ ನದಿ ಆಗಿದೆ. ಸುಮಾರು ೧೧ ಕಿ.ಮೀ. ಹರಿದ ನದಿಗೆ 'ಚಿಕ್ಕಹೊಳೆ' ಎಂಬ ಉಪನದಿ ಸೇರುತ್ತದೆ. ಮುಂದೆ ತಾಲ್ಲೂಕಿನ ಪ್ರಾರಂಭದ ಗ್ರಾಮ ಅಂಬಳೆ ಎಂಬಲ್ಲಿ ನದಿ ನೀರಿನ ಉಪಯೋಗ ಪ್ರಾರಂಭಗೊಳ್ಳುತ್ತದೆ. ಈ ತಾಲ್ಲೂಕು ಬೆಲ್ಲ ಮತ್ತು ತೆಂಗಿನ ಕಣಜವಾಗಿರುವ ಈ ಪ್ರದೇಶ ಮೆಕ್ಕಲು ಮಣ್ಣಿನಿಂದ ಆವೃತವಾಗಿದ್ದು ವ್ಯವಸಾಯಕ್ಕೆ ಯೋಗ್ಯವಾದ ಮಣ್ಣಾಗಿದೆ.

ಈ ನದಿಯ ದಡದಲ್ಲಿ ಗ್ರಾಮವಿರುವುದರಿಂದ ಇಲ್ಲಿನ ವ್ಯವಸಾಯಕ್ಕೆ ಬೇಕಾಗಿರುವ ನೀರು ಭೂಮಿಯ ಒಳಭಾಗದಲ್ಲಿ ಕೆಲ ಅಡಿಗಳ ಅಂತರದಲ್ಲಿ ಬಹಳ ಸುಲಭವಾಗಿ ದೊರೆಯುತ್ತದೆ. ಇದಕ್ಕೆ ಕಾರಣ ನದಿ ನೀರಿನ ಸೆಲೆ. ವರ್ಷವಿಡೀ ಈ ಪ್ರದೇಶ ವಾಣಿಜ್ಯ ಮತ್ತು ಆಹಾರ ಬೆಳೆಗಳಿಂದ ಕೂಡಿ ಪ್ರಕೃತಿಯೇ ಭೂಮಿ ತಾಯಿಗೆ ಸೀರೆಯನ್ನು ಉಡಿಸಿರುವುದೋ ಎಂಬಂತೆ ಕಂಗೊಳಿಸಿರುತ್ತದೆ. ನದಿಗೆ ಅನೇಕ ಕೊರಬುಗಳನ್ನು ನಿರ್ಮಿಸಿ ಅಂದಿನ ಜನಸಾಮಾನ್ಯರು ನೀರನ್ನು ಕಾಲುವೆಗಳ ಮುಖಾಂತರವಾಗಿ ಕೆರೆಕಟ್ಟೆಗಳಿಗೆ ತುಂಬಿಕೊಂಡು ವ್ಯವಸಾಯಕ್ಕೆ ಬಳಸಿಕೊಳ್ಳುತ್ತಿದ್ದರು. ಇದು ಅಂದಿನ ಕಾಲದ ಜನರಿಗೆ ಸರ್ವೇ ಸಾಮಾನ್ಯವಾದ ಸಂಗತಿಯಾಗಿರಲಿಲ್ಲ. ಏಕೆಂದರೆ ಮಳೆಗಾಲದಲ್ಲಿ ಮಾತ್ರ ನದಿ ಹರಿಯುತ್ತವೆಯೇ ವಿನಃ ಬೇಸಿಗೆಯಲ್ಲಿ ನೀರು

ದೊರಕುತ್ತಿರಲಿಲ್ಲ. ಕಾಲಮಾನದಲ್ಲಿ ದೊರಕುವ ನೀರನ್ನು ಬಳಸಿಕೊಂಡು ರೈತರು ಕಬ್ಬು, ಬಾಳೆ, ತೆಂಗುಗಳಂತಹ ಬೆಳೆಗಳನ್ನು ಬೆಳೆಯಲು ನದಿ ನೀರು ಸಹಾಯಕವಾಗಿತ್ತು.

ಅಂಬಳೆ ಗ್ರಾಮದ ಕೊರಬನ್ನು ದಾಟಿ ನದಿ ಕಾರಾಪುರದ ಮಠವನ್ನು ಸುತ್ತಿಕೊಂಡು ಉತ್ತರಾಭಿಮುಖವಾಗಿ ಯಳಂದೂರನ್ನು ಪ್ರವೇಶಿಸುತ್ತದೆ. ಅಂದಿನ ಕಾಲದಲ್ಲಿ ಯಳಂದೂರು ಎಳನೀರಿಗೆ ಪ್ರಸಿದ್ಧಿಗಳಿಸಬೇಕಾದರೆ ಸುವರ್ಣಾವತಿ ನದಿ ನೀರಿನ ಸವಿಯೇ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಯಳಂದೂರು 'ವೀಳ್ಯದ ಕಣಜ' ಎಂದು ಖ್ಯಾತಿಗಳಿಸಲು ಈ ನದಿಯ ಪಾತ್ರ ಮಹತ್ತರವಾದದ್ದು. ನದಿ ನೀರು ಸಾಮಾನ್ಯ ವರ್ಗಕ್ಕೆ ವರಪ್ರಸಾದವಾಗಿತ್ತು. ವೀಳ್ಯದ ತೋಟಗಳಿಗೆ ನದಿ ನೀರುಣಿಸಿ ಅಂದಿನ ಕಾಲದಲ್ಲಿ ವಾಣಿಜ್ಯ ಮಾರ್ಗಕ್ಕೆ ಹಾದಿಯನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಎಳನೀರಿನ ತಾಣವಾಗಿದ್ದ ಈ ಪ್ರದೇಶದ ಜನಸಾಮಾನ್ಯರು, ವೀಳ್ಯದ ಎಲೆ, ಎಳನೀರಿನ ಬೆಳೆಯಿಂದ ಜೀವನ ಸಾಗಿಸಲು ಸುಲಭ ಮಾರ್ಗವನ್ನು ಕಂಡುಕೊಳ್ಳುವಂತಾಗಿತ್ತು.

ಸುವರ್ಣಾವತಿ ನದಿ ಯಳಂದೂರಿನ ಮುಂದಿರುವ ಗಣಿಗನೂರು ಬಳಿ ಒಂದು ಅಡ್ಡ ಬದಿಯನ್ನು ನಿರ್ಮಿಸಿಕೊಂಡಿದೆ. ನೀರನ್ನು ಕಾಲುವೆಯ ಮುಖಾಂತರವಾಗಿ ಅಗರದ ಕೆರೆಗೆ, ಮದ್ದೂರು ಕೆರೆಗೆ ಸಾಗಿಸುವಂತಹ ಒಂದು ವ್ಯವಸ್ಥೆ ನಿರ್ಮಾಣವಾಗಿದೆ. ಈ ನೀರಿನಿಂದ ಯಳಂದೂರಿನ ಗ್ರಾಮಗಳಿಗೆ ಸುಮಾರು ಮುನ್ನೂರು ಎಕರೆಗಳಷ್ಟು ಪ್ರದೇಶದಲ್ಲಿ ಭತ್ತದ ಬೆಳೆ, ತೆಂಗು, ಬಾಳೆ, ಅಡಿಕೆ ಬೆಳೆಗಳಿಗೆ ನೀರು ಬಳಕೆಯಾಗುತ್ತಿದೆ. ಈ ಪ್ರಾಂತ್ಯದ ಎಳನೀರು ಕೂಡ ತುಂಬಾ ಸವಿಯಾಗಿರಲು ನದಿಯ ನೀರೇ ಕಾರಣವಾಗಿದೆ.

ಮಳೆಗಾಲದಲ್ಲಿ ಮಳೆನೀರಿನಿಂದ ತುಂಬಿ ಬೇಸಿಗೆಯಲ್ಲಿ ಬತ್ತುತ್ತಿದ್ದ ಈ ನದಿಯನ್ನು 'ಮೃತನದಿ' ಎಂದು ಕರೆಯುವುದುಂಟು. ನದಿಯ ಇಕ್ಕೆಲಗಳಲ್ಲಿ ಫಲವತ್ತಾದ ಮೆಕ್ಕಲು ಮಣ್ಣಿನ ಭೂಮಿಗಳಿಗೆ ರೈತರು ಡೀಸೆಲ್ ಇಂಜಿನ್‌ಗಳ ಮುಖಾಂತರವಾಗಿ ನೀರುಣಿಸಿ ಅನೇಕ ವಾಣಿಜ್ಯ ಬೆಳೆಗಳನ್ನು ಬೆಳೆಯಲು ನದಿ ಸಹಾಯಕವಾಗಿದೆ.

ಇತ್ತೀಚಿನ ವರ್ಷಗಳಲ್ಲಿ ನದಿಯ ನೀರಿನ ಕೊರತೆಯು ಕಾಣಬರುತ್ತಿಲ್ಲ. ಇದಕ್ಕೆ ಕಾರಣವೇನೆಂದರೆ ಕಬಿನಿ ನಾಲಾ ನೀರು ನದಿಯ ಪ್ರದೇಶದಲ್ಲಿ ಹರಿಯುವುದರಿಂದ ಗದ್ದೆ ಬಯಲಿನಿಂದ ಬರುವ ಸೋರಿಕೆಯ ನೀರು ನದಿಗೆ ಜೀವ ನೀಡಿ ವರ್ಷವಿಡೀ ನೀರು ಬತ್ತದಿರುವಂತೆ ಕಾಪಾಡುತ್ತಿದೆ. ಮದ್ದೂರು ಬಳಿಯಲ್ಲಿ 'ಹೆಬ್ಬಳ್ಳ' ಎಂಬ ಹಳ್ಳದಿಂದ ಸುಮಾರು ಸೋರು ನೀರು ಸೇರುತ್ತದೆ. ಅಲ್ಲಿಯೇ ನದಿಗೆ ಸಾರ್ವಜನಿಕರು

ಗಾಡಿ ತಿರುಗಾಟದ ಉಪಯೋಗಕ್ಕೆಂದು ಒಂದು ಸೇತುವೆಯನ್ನು ಸಹ ನಿರ್ಮಿಸಿಕೊಂಡಿದ್ದಾರೆ ತಾಲ್ಲೂಕಿನ ಚಾಮಾಲಾಪುರ ಎಂಬ ಗ್ರಾಮದಲ್ಲಿನ ಜನರಿಗೆ ನದಿ ನೀರು ವರಪ್ರಸಾದವೇ ಸರಿ. ಕಾರಣವೇನೆಂದರೆ ತುಂಬಾ ಮೆಕ್ಕಲು ಮಣ್ಣಿನ ಪ್ರದೇಶ ಇದಾಗಿದ್ದು ನೀರಾವರಿಯಿಂದಾವೃತವಾಗಲು ನದಿ ನೀರಿನ ಸೆಲೆಯೇ ಕಾರಣವಾಗಿದೆ. ಸುಮಾರು ಭೂಮಿಯಲ್ಲಿ ಕೆಲವೇ ಅಡಿಗಳ ತೋಡು ಬಾವಿಗಳಲ್ಲಿ ತುಂಬಾ ಕಡಿಮೆ ವೆಚ್ಚದಲ್ಲಿ ಉತ್ತಮವಾದ ಬೆಳೆಗಳನ್ನು ಬೆಳೆಯಲು ನೀರಾವರಿ ವ್ಯವಸ್ಥೆ ಕಲ್ಪಿಸಿಕೊಳ್ಳಬಹುದಾಗಿದೆ.

ಈ ನದಿಯು ಹರಿದೆಡೆಯಲ್ಲೆಲ್ಲಾ ತುಂಬಾ ಸಮೃದ್ಧಿ ಮತ್ತು ಶಾಂತಿ ನೆಲೆಗೊಂಡಿದೆ. ಕಾರಣವೇನೆಂದರೆ ಉತ್ತಮವಾದ ಒಕ್ಕಲುತನಕ್ಕೆ ಬೇಕಾದ ಎಲ್ಲಾ ರೀತಿಯ ಅನುಕೂಲಗಳನ್ನು ಸುವರ್ಣಾವತಿಯು ಈ ಭಾಗದ ಜನರಿಗೆ ಒದಗಿಸಿಕೊಡುತ್ತಿದೆ. ಆದಿ ಕಾಲದಿಂದಲೂ ಜನರಿಗೆ ವರಪ್ರಸಾದವಾಗಿದೆ. ಕೆಲವೇ ವರ್ಷಗಳ ಹಿಂದೆ ನದಿ ನೀರಿನಿಂದ ಕಡಿಮೆ ಉಪಯೋಗ ದೊರಕಿದ್ದರೂ ಅದೇ ಆ ಕಾಲಕ್ಕೆ ಮೇಲ್ಮಟ್ಟದ್ದೆ ಆಗಿತ್ತು ಅನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ತನ್ನ ಎಲ್ಲಾ ರೀತಿಯ ಅನುಕೂಲವನ್ನು ನದಿ ತಾಲ್ಲೂಕಿಗೆ ನೀಡುತ್ತಾ ಬಂದಿದೆ. ಮನೆಗಳನ್ನು ಕಟ್ಟಲು ಯೋಗ್ಯವಾದಂತಹ ಮರುಳು ಕೂಡ ನದಿಯಲ್ಲಿ ದೊರಕುತ್ತದೆ. ವರ್ಷಕ್ಕೆ ಎರಡು ಮೂರು ಬಾರಿಯಾದರೂ ಪ್ರವಾಹ ಬರುತ್ತದೆ. ಆ ವೇಳೆಯಲ್ಲಿ ತನ್ನೊಂದಿಗೆ ಮರಳನ್ನು ಹೊತ್ತು ತಂದು ಇಲ್ಲಿನ ಜನತೆಗೆ ಉತ್ತಮವಾದ ಭವ್ಯ ಬಂಗಲೆಗಳ ನಿರ್ಮಾಣಕ್ಕೆ ಸಹಕಾರಿಯಾಗಿದೆ. ಹೀಗೆ ಒಂದು ಕಾಲದಲ್ಲಿ ಮೃತನದಿಯಾಗಿದ್ದುದು ಈಗ ಜೀವನದಿಯಾಗಿದೆ. ತಾಲ್ಲೂಕಿನ ಆರ್ಥಿಕ ಪ್ರಗತಿಗೆ ಸಹಾಯಕವಾಗಿದೆ. ಮದ್ದೂರಿನ ಸೇತುವೆಯನ್ನು ದಾಟಿದ ನಂತರ ಅಗರ–ಮಾಂಬಳ್ಳಿಯ ಮುಖಾಂತರ ಹಾದು ಹೋಗುವ ನದಿ ಅಲ್ಲಿಯೂ ಕೂಡ ತನ್ನ ಪಾವಿತ್ರ್ಯತೆಯನ್ನು ಮೆರೆದಿದೆ. ನಂತರ ಕೊಳ್ಳೇಗಾಲದ ಎಲ್ಲೆಯನ್ನು ಪ್ರವೇಶಿಸಿ ನಂತರ ದಾಸನೂರು, ಕಡವು ಎಂಬಲ್ಲಿ ಕಾವೇರಿ ನದಿಯನ್ನು ಸೇರಿ ಶಿವನಸಮುದ್ರದ ಮುಖಾಂತರ ತಮಿಳುನಾಡನ್ನು ಪ್ರವೇಶಿಸುತ್ತದೆ.

ತಾಲ್ಲೂಕಿನ ಪ್ರಾರಂಭದಿಂದಲೂ ಕೊನೆಯವರೆವಿಗೂ ರೈತನ ದಣಿವಿಗೆ ನೀರುಣಿಸಿ ತನ್ನದೇ ಆದ ರೀತಿಯಲ್ಲಿ ರೈತರ ವಾಣಿಜ್ಯ ಆಹಾರ ಬೆಳೆಗಳಿಗೆ ಉತ್ತಮವಾದ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟು ತಾಲ್ಲೂಕಿನ ಜನತೆಗೆ ಉತ್ತಮವಾದ ಆರ್ಥಿಕ ತಾಣವಾಗಿರಿಸಲು ನದಿ ಸಹಾಯ ಹಸ್ತವನ್ನು ಇಂದಿಗೂ ಬಾಚಿ ನಿಂತಿದೆ ಎಂದರೆ ಅತಿಶಯೋಕ್ತಿ ಎನಿಸಲಾರದು. 'ಸಮುದ್ರಕ್ಕೆ ತೆರೆಯುಂಟು, ನದಿಗೆ ಬಯಲುಂಟು, ಬಯಲಿನ ಬೆಳೆಗೆ ನದಿಯ ನೀರು ಶಾಶ್ವತವಾಗಿ ಉಂಟು' ಎಂಬ ಮಾತು ಎಂದೆಂದಿಗೂ ಸತ್ಯವಾದುದು. ಶಾಶ್ವತವಾದುದು ಮತ್ತು ಚಿರನೂತನವಾದುದು.

## ಅಧ್ಯಾಯ ೩

# ಯಳಂದೂರಿನ ಇತಿಹಾಸ

**'ಯಳಂದೂರು' ಸ್ಥಳನಾಮದ ಪರಿಚಯ :**

ಕ್ರಿ.ಪೂ. ನಾಲ್ಕನೇ ಶತಮಾನದಲ್ಲಿ ಕರ್ನಾಟಕಕ್ಕೆ ಬಂದ ಜೈನಧರ್ಮ ಅನಂತರದ ದಿನಗಳಲ್ಲಿ ದಕ್ಷಿಣ ಭಾರತದಾದ್ಯಂತ ವ್ಯಾಪಿಸಿತು. ತಮ್ಮ ಹನ್ನೆರಡು ಸಾವಿರ ಶಿಷ್ಯರೊಡಗೂಡಿ ಭದ್ರಬಾಹು ಭಟ್ಟಾರಕರು ಕಳ್ಪಪ್ಪುವಿನಲ್ಲಿ (ಈಗಿನ ಶ್ರವಣಬೆಳಗೊಳ) ಬಂದು ನೆಲೆಸಿದರು. ಮುಂದೆ ಅಲ್ಲಿಂದ ಕೆಲವರು ತಮಿಳುನಾಡಿನತ್ತ ಪ್ರಯಾಣ ಬೆಳೆಸಿದರು. ಹೀಗೆ ಪ್ರಯಾಣ ಮಾಡುವಾಗ ಅಲ್ಲಲ್ಲಿ ಕೆಲವರು ನೆಲೆಸಿದರು. ಈ ಕಾರಣಕ್ಕಾಗಿ ಉಮ್ಮತ್ತೂರು, ಕುದೇರು, ಹಾಲುಗೂಡು, ಬಸದಿಪುರ, ಕೊಳ್ಳೇಗಾಲ, ಮುಡಿಗುಂಡಂ, ಯಳಂದೂರು, ಮಲೆಯೂರು, ಗುಂಡ್ಲುಪೇಟೆ, ಚಾಮರಾಜನಗರದ ಕನಕಗಿರಿ ಇವೆಲ್ಲವೂ ಜೈನಧರ್ಮದ ಕೇಂದ್ರಗಳಾಗಿದ್ದು ಇಂದಿಗೂ ಇಲ್ಲಿನ ಕೆಲವು ಕಡೆ ಬಸದಿಗಳು ಸುಸ್ಥಿತಿಯಲ್ಲಿರುವುದನ್ನು ಕಾಣಬಹುದು. ಪೂಜ್ಯಪಾದ ಮತ್ತು ದೇವನಂದಿ ಎಂಬ ಜೈನಮುನಿಗಳು ಈ ಎಲ್ಲಾ ಸ್ಥಳಗಳಲ್ಲಿ ಸಂಚರಿಸಿ ತಮ್ಮ ಜೀವಿತದ ಕೊನೆಯ ದಿನಗಳನ್ನು ಮಲೆಯೂರಿನ ಕನಕಗಿರಿಯಲ್ಲಿ ಕಳೆದರು. ಪೂಜ್ಯಪಾದರ ಸಮಾಧಿ ಕನಕಗಿರಿಯಲ್ಲಿ ಇದೆ. ಮತ್ತೊಬ್ಬ ಪ್ರಮುಖ ಜೈನ ಮುನಿಗಳೆಂದರೆ ಬಾಲಚಂದ್ರಮುನಿಗಳು ಇವರ ಹೆಸರಿನಲ್ಲಿ 'ಬಾಲಚಂದ್ರಪುರ' ಎನ್ನುವ ಊರು ಸ್ಥಾಪಿತವಾಗಿದೆ. ಆ ಬಾಲಚಂದ್ರಪುರವೇ ಇಂದಿನ ಯಳಂದೂರಾಗಿರಬಹುದು. ಎಳೆಯ (ಬಾಲ) ಇಂದು(ಚಂದ್ರ) ಪುರ (ಊರು) ಎಳೆಯ ಇಂದು ಊರು ಮುಂದೆ 'ಯಳಂದೂರು' ಎಂದಾಗಿರಬಹುದೆಂದು ಇಲ್ಲಿನ ಜನರ ಅಭಿಪ್ರಾಯವಾಗಿದೆ.

ಪಂಡಿತ ಕವಿಯಾದ ಷಡಕ್ಷರಿಯು ತನ್ನ 'ಶಿವಾದಿತ್ಯ ರತ್ನಾವಳಿ', 'ಭಕ್ತಾದಿತ್ಯ ರತ್ನಾವಳಿ' ಎಂಬ ತನ್ನ ಸಂಸ್ಕೃತ ಗ್ರಂಥಗಳ ಕೊನೆಯಲ್ಲಿ ತಾನು 'ಬಾಲೇಂದು ಪುರಾವರಾಧೀಶ ಮುದ್ದು ಭೂಮಿಪದ ಕುಲಗುರು' ಎಂದು ಹೇಳಿಕೊಂಡಿದ್ದಾನೆ. ಇಲ್ಲಿ ಬಂದಿರುವ ಬಾಲೇಂದುಪುರವೇ ಯಳಂದೂರು ಎಂದು ಇಲ್ಲಿ ಮುದ್ದುರಾಜನು ಷಡಕ್ಷರಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟಿರುವನೆಂಬ ಅಂಶದಿಂದ ಷಡಕ್ಷರಿಯು ನೆಲೆಸಿದ ಬಾಲೇಂದುಪುರವೆ ಯಳಂದೂರಾಗಿದೆ.

**ಯಳಂದೂರಿನ ಇತಿಹಾಸ**

ಭಾರತದ ರಾಜಕೀಯ ಇತಿಹಾಸವನ್ನು ಅವಲೋಕಿಸಿದಾಗ ಐತಿಹಾಸಿಕ ಪರಂಪರೆಯ ಮೇಲೆ ಬೆಳಕು ಚೆಲ್ಲಬಹುದಾದ ಭದ್ರ ನೆಲೆಗಟ್ಟು ಇಲ್ಲವೆಂಬುದು ಸ್ಪಷ್ಟ. ಇತಿಹಾಸಕಾರರ ಅಸಡ್ಡೆಯೂ ಇದಕ್ಕೆ ಒಂದು ಕಾರಣ. ಕೇವಲ ನಾಮಾಂಕಿತ

ರಾಜಮನೆತನಗಳ ಬಗ್ಗೆ ಮಾತ್ರ ಸಾಹಿತ್ಯಾಧಾರಗಳು ಹಾಗೂ ಶಾಸನಗಳು ಬೆಳಕು ಚೆಲ್ಲುತ್ತವೆ. ಸಾಮ್ರಾಜ್ಯಶಾಹಿಯ ಅಬ್ಬರದ ನಡುವೆ ನುಸುಳಿ ಹೋಗಿರುವ ಅದೆಷ್ಟೋ ಸಣ್ಣಪುಟ್ಟ ರಾಜರು, ಪಾಳೆಯಪಟ್ಟಗಳು ಅಷ್ಟೇನೂ ಬೆಳಕಿಗೆ ಬಾರದಿದ್ದರೂ ಅವುಗಳ ಕೊಡುಗೆ ಕಡೆಗಣಿಸುವಂತಹದ್ದಲ್ಲ. ನಮ್ಮ ದೇಶದ ಮೂಲೆ ಮೂಲೆಯಲ್ಲಿ ತಲೆಯೆತ್ತಿ ನಿಂತಿರುವ ದೇಗುಲದ ಗುಡಿಗೋಪುರಮತ್ತು ಮಂಟಪಗಳು ನಮ್ಮ ಭವ್ಯ ಇತಿಹಾಸದ ಪ್ರತೀಕಗಳಾಗಿವೆ. ನಮ್ಮ ಸಾಹಿತ್ಯ ಪರಂಪರೆಯ ಕೊಡುಗೆಯೂ ಈ ನಿಟ್ಟಿನಲ್ಲಿ ಮಹತ್ವದ್ದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ನಾಡಿನ ಪ್ರಸಿದ್ಧ ರಾಜಮನೆತನಗಳಾದ ಹೊಯ್ಸಳ, ಗಂಗ, ಕದಂಬ, ರಾಷ್ಟ್ರಕೂಟ, ವಿಜಯನಗರದ ಅರಸರು, ಮೈಸೂರು ಒಡೆಯರುಗಳ ಆಳ್ವಿಕೆಯ ನೆರಳಿನಲ್ಲಿ ಅಲ್ಲಲ್ಲಿದ್ದ ಸಣ್ಣಪುಟ್ಟ ಸಾಮಂತರು, ಪಾಳೆಯಗಾರರು ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡಿದ್ದಾರೆ. ಅಂತಹುದೊಂದು ರಾಜಮನೆತನ ಮೈಸೂರು ಸಮೀಪದ ಯಳಂದೂರಿನಲ್ಲಿ ಆಳ್ವಿಕೆ ನಡೆಸಿರುವುದು ಹೆಮ್ಮೆಯ ಸಂಗತಿ.

ಯಳಂದೂರಿನ ಐತಿಹಾಸಿಕ ಪರಂಪರೆಯನ್ನು ಗಮನಿಸಿದಾಗ, ಇಲ್ಲಿ ಯಾವುದೇ ರಾಜಮನೆತನಗಳು ಆಳಿ-ಅಳಿದ ಸಂಗತಿಗಳಿಗೆ ನೇರ ಪುರಾವೆಗಳು ಲಭ್ಯವಾಗಿಲ್ಲ. ಆದರೆ ಇಲ್ಲಿನ ದೇವಾಲಯಗಳು ಮತ್ತಿತರ ಕಡೆಗಳಲ್ಲಿ ಲಭ್ಯವಿರುವ ಶಾಸನಗಳು ಹಾಗೂ ಸಾಹಿತ್ಯ ಕೃತಿರತ್ನಗಳಾದ ಷಡಕ್ಷರದೇವರ ಕೃತಿಗಳು, ಸಂಚಿಯ ಹೊನ್ನಮ್ಮನ (೧೭ನೇ ಶತಮಾನ) ಹದಿಬದೆಯ ಧರ್ಮ, ಮುಪ್ಪಿನ ಷಡಕ್ಷರಿ (೧೭ನೇ ಶತಮಾನ) ಯಳಂದೂರು ಹರೀಶ್ವರ ಹಾಗೂ ನೇಮಿಚಂದ್ರರ ಕೃತಿಗಳಲ್ಲಿ ಇದೊಂದು ಸಂಪದ್ಭರಿತವಾದ ಹಾಗೂ ಜನಾಕರ್ಷಕವಾದ ಸ್ಥಳವಾಗಿದ್ದು ಇಲ್ಲಿ ನಿರ್ದಿಷ್ಟ ರಾಜಮನೆತನಗಳು ಇದ್ದುವೆಂಬುದನ್ನು ದೃಢಪಡಿಸುತ್ತದೆ.

ಯಳಂದೂರನ್ನು ಆಳಿದ ಬಹುಮುಖ್ಯ ರಾಜಮನೆತನವೆಂದರೆ ಹದಿನಾಡು ಮನೆತನ. ಇವರಿಗೂ ಆ ಕಾಲದಲ್ಲಿ ಪ್ರಬಲರಾಗಿದ್ದ ಮೈಸೂರು ಒಡೆಯರ ಸಂತತಿಗೂ ಅವಿನಾಭಾವ ಸಂಬಂಧ ಬೆಳೆದು ಬಂದಿದೆ. ಇಲ್ಲಿನ ಪೌರಾಣಿಕ ಹಾಗೂ ರಾಜಕೀಯ ಹಿನ್ನೆಲೆಯ ವಿವಿಧ ಮಜಲುಗಳನ್ನು ಮೊದಲು ನೋಡೋಣ.

ಇಲ್ಲಿನ ಕಳಸಪ್ರಾಯವಾದ ದೇಗುಲವೆಂದರೆ ಗೌರೀಶಂಕರ ದೇವಾಲಯ. ಇದರ ದಕ್ಷಿಣ ಭಾಗದಲ್ಲಿರುವ ನಂದೀಮಂಟಪದಲ್ಲಿರುವ ಶಿಲಾಶಾಸನದಲ್ಲಿ ಈ ದೇವರು ಕೃತಯುಗದಲ್ಲಿ ತ್ರಿಪುರಾಂತಕನೆಂಬ ಹೆಸರಿನಿಂದ ಜಮದಗ್ನಿ ಮಹರ್ಷಿಯಿಂದಲೂ, ತ್ರೇತಾಯುಗದಲ್ಲಿ ನೀಲಕಂಠನೆಂಬ ಹೆಸರಿನಿಂದ ಶ್ರೀರಾಮನಿಂದಲೂ, ದ್ವಾಪರದಲ್ಲಿ ಪಾಂಡವರು ಲೋಕೇಶ್ವರನೆಂಬ ಹೆಸರಿನಿಂದಲೂ, ಕಲಿಯುಗದಲ್ಲಿ ಗೌರೀಶ್ವರನೆಂದು ಪದಿನಾಡ ಅರಸರುಗಳಿಂದಲೂ ಪೊಡೆಗೊಂಡನೆಂದು ತಿಳಿದುಬರುತ್ತದೆ.

ಶ್ರೀರಾಮನು ಸೀತಾ ಲಕ್ಷ್ಮಣರೊಡಗೂಡಿ, ದಂಡಕಾರಣ್ಯದ ಭಾಗವಾದ ಇಲ್ಲಿ ಸಂಚರಿಸಿದುದಾಗಿ ತಿಳಿದುಬರುತ್ತದೆ. ಇಲ್ಲಿ ಹರಿಯುವುದು ಸ್ವರ್ಣನದಿ, ಮಾಯಾನದಿ ಎಂಬ ಉಲ್ಲೇಖವಿದೆ. ಇದಲ್ಲದೆ ಕುಷ್ಠ ರೋಗಿಯೋರ್ವನು ಸುವರ್ಣಾವತಿ ನದಿಯಲ್ಲಿ ಮಿಂದು ಮುಕ್ತಿ ಹೊಂದಿದ ಪ್ರಸಂಗದ ಪ್ರಸ್ತಾಪವನ್ನು ಗಮನಿಸಬಹುದು. ಪರಶುರಾಮನು ಶ್ವೇತಾಚಲದಿಂದ ತನ್ನ ಮಾತೃಹತ್ಯಾದೋಷ ನಿವಾರಣೆಗಾಗಿ ಸುವರ್ಣಾವತಿ ನದಿಯಲ್ಲಿ ಮಿಂದು ಪಂಚಲಿಂಗದರ್ಶನ ಮಾಡಿದ್ದಾರೆ. ವಿಷ್ಣುವರ್ಮನೆಂಬ ರಾಜನಿಗೆ ಅಂಟಿದ ವಿಷನಿವಾರಣೆಯಾದ ಸ್ಥಳವನ್ನು 'ಅಗರ' ಎಂದು ಹೆಸರಿಸಲಾದ ಪ್ರಸ್ತಾಪವೂ ಕೂಡ ಇದೆ.

**ಶಾಸನಾಧಾರಗಳು**

ಪವಿತ್ರ ಶ್ರೀ ಗೌರೀಶ್ವರ ದೇವಾಲಯದಲ್ಲಿರುವ ಶಾಸನವೊಂದರಲ್ಲಿ ಹೊನ್ನುಹೊಳೆ (ಸುವರ್ಣಾವತಿ) ಹರಿದ ಬಗ್ಗೆ ದಂತಕತೆಯೊಂದರ ಉಲ್ಲೇಖವಿದೆ. ಇದರ ಬದಿಯಲ್ಲಿ ಇರುವ ಊರೇ ಯಳಂದೂರಾಗಿದ್ದು. ಈ ಪ್ರಾಂತ್ಯದ ಪೂರ್ವದಿಕ್ಕಿನಲ್ಲಿ 'ಶ್ವೇತ ನೀಲಾದ್ರಿ' ಎಂದು ಕರೆಯಲ್ಪಡುವ ಬಿಳಿಗಿರಿರಂಗನ ಬೆಟ್ಟವೂ, ವಾಯುವ್ಯದಲ್ಲಿ ಕಾರಾಪುರ ಮಠವೂ, ದಕ್ಷಿಣ ದಿಕ್ಕಿನಲ್ಲಿ ಸುರಗಿರಿ, ನೈರುತ್ಯದಲ್ಲಿ ಶಂಕರೇಶ್ವರ ಬೆಟ್ಟ. ಪಶ್ಚಿಮದಲ್ಲಿ ಜನ್ನೂರಿನವರೆಗೂ, ಈಶಾನ್ಯದಲ್ಲಿ ಶಂಭುಲಿಂಗನ ಕ್ಷೇತ್ರದವರೆಗೂ, ಉತ್ತರದಲ್ಲಿ ಮುಡುಕುತೊರೆಯವರೆವಿಗೂ ಹಬ್ಬಿ ಅಷ್ಟದಳದ ಕಮಲದ ಮಧ್ಯೆ ಬಾಲೇಂದುಪುರವು ಶೋಭಿಸುತ್ತಿತ್ತು ಎಂದಿದೆ.

ಲಭ್ಯವಿರುವ ಶಾಸನಾಧಾರಗಳಿಂದ ಈ ಪ್ರಾಂತ್ಯವನ್ನು ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಉಮ್ಮತ್ತೂರು ಪಾಳೇಗಾರರು ಆಳಿದ್ದಾರೆಂಬುದು ಸ್ಪಷ್ಟ. ಯಳಂದೂರನ್ನು ಅಧಿಕೃತವಾಗಿ ಆಳಿದವರಲ್ಲಿ ಪದಿನಾಡ (ಹದಿನಾಡು) ಅರಸರೇ ಪ್ರಮುಖರೆಂದು ಹೇಳಬಹುದು. ಈ ಮನೆತನದ ಮೊದಲ ರಾಜ ಸಿಂಗದೇವಭೂಪ. ಈತನು ಯಳಂದೂರಿನಲ್ಲಿ ಗೌರೀಶ್ವರ ದೇವಾಲಯವನ್ನು ನಿರ್ಮಿಸಿ ತನ್ನ ಭಕ್ತಿನಿಷ್ಠೆಯನ್ನು ತೋರಿಸಿದ್ದಾನೆ. ಮುಂದೆ ಈ ಸಂತತಿಯ ದೊರೆಗಳು ದೇವಾಲಯದ ಪುರೋಭಿವೃದ್ಧಿಗೆ ಸಹಕರಿಸಿದ್ದಾರೆ. ಶಾಮನೃಪಾಲ(೧೫೪೭–೬೮) ಎಂಬ ದೊರೆ ಯಳಂದೂರಿಗೆ ಸಮೀಪದ ಗಣಿಗನೂರನ್ನು ಕೊಡುಗೆಯಾಗಿ ನೀಡಿದ್ದಾನೆ. ಇವನ ಮಗ ಚಿನ್ನರಾಜ, ಅನಂತರ ನಂಜರಾಜ ಮತ್ತು ತಿರುಮಲರಾಜರು ಆಳ್ವಿಕೆಯನ್ನು ಮುಂದುವರೆಸಿಕೊಂಡಿದ್ದರು. ಈ ಸಂತತಿಯ ಅತ್ಯಂತ ಪ್ರಸಿದ್ಧ ದೊರೆ ಮುದ್ದುರಾಜನು ಗೌರೀಶ್ವರ ದೇವಾಲಯದ ಮಂಟಪ, ಗೋಪುರ ಹಾಗೂ ಕೆಲವು ಗುಡಿಗಳನ್ನು ಕಟ್ಟಿಸಿದ್ದಾನೆ.

ವೀರ ವಿರಕ್ತ ಕವಿಶೇಖರನಾದ ಮಹಾಕವಿ ಷಡಕ್ಷರಿ ದೇವರು ತಮ್ಮ ಕಾಲದಲ್ಲಿ ಹದಿನಾರು ಮತ್ತು ಮೈಸೂರು ರಾಜರ ನಡುವೆ ಇದ್ದ ಸಂಬಂಧವನ್ನು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ದೇವಚಂದ್ರನು ತನ್ನ 'ರಾಜಾವಳಿ ಕಥೆ'ಯಲ್ಲಿ ಇದರ ಬಗ್ಗೆ ಸ್ಪಷ್ಟವಾಗಿ ತಿಳಿಸಿದ್ದಾರೆ.

ಪುರಾಣದ ಪ್ರಕಾರ ಜಮದಗ್ನಿಯ ಮಗ ಪರಶುರಾಮನು ಇಲ್ಲಿನ ಗೌರೀಶ್ವರ, ವರಾಹಾಸ್ವಾಮಿ ದೇವರ ದರ್ಶನ ಮಾಡಿ ಕಾಶಿಗೆ ತಪಸ್ಸು ಮಾಡಲು ಹೋದರೆಂದು, ಇತಿಹಾಸದ ಪ್ರಕಾರ ೫-೬ನೇ ಶತಮಾನದಲ್ಲಿ ಗಂಗರಾಜನು ಕಾವೇರಿ ತೀರದಲ್ಲಿರುವ ತಲಕಾಡನ್ನು ರಾಜಧಾನಿಯಾಗಿ ಮಾಡಿಕೊಂಡು ಈ ಪ್ರದೇಶಗಳನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ಲಭ್ಯವಿರುವ ಶಾಸನಗಳ ಪ್ರಕಾರ ಕ್ರಿ.ಶ.೧೧೧ರ ಸಮಯದಲ್ಲಿ ಕುಲೋತ್ತುಂಗ ಚೋಳನು ೪೬ ವರ್ಷಗಳ ಕಾಲ ದೊರೆಯಾಗಿ ಆಳ್ವಿಕೆ ನಡೆಸಿದನು. ಮುಂದೆ ಹೊಯ್ಸಳರು, ವಿಜಯನಗರದ ಅರಸರು, ಉಮ್ಮತ್ತೂರು (ಹದಿನಾಡು) ಮತ್ತು ಮೈಸೂರು ರಾಜರುಗಳು ಈ ಪ್ರಾಂತ್ಯವನ್ನು ಆಳ್ವಿಕೆ ಮಾಡಿದರೆಂಬುದು ತಿಳಿದುಬರುತ್ತದೆ. ಮೈಸೂರು ಒಡೆಯರುಗಳು ಆಡಳಿತಕ್ಕೆ ಒಳಪಟ್ಟ ಯಳಂದೂರನ್ನು (ಕ್ರಿ.ಶ. ೧೮೦೭ರಲ್ಲಿ) ಅಂದಿನ ದಿವಾನರಾಗಿದ್ದ ಪೂರ್ಣಯ್ಯನವರಿಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಬ್ರಿಟಿಷರ ಅನುಮತಿಯನ್ನು ಪಡೆದು ಪೂರ್ಣಯ್ಯನವರ ಪ್ರಾಮಾಣಿಕ ಮತ್ತು ನಿಷ್ಠಾವಂತ ಸೇವೆಯನ್ನು ಮೆಚ್ಚಿ ಜಹಗೀರಾಗಿ ಕೊಟ್ಟರು. ಅನಂತರ ಇನಾಂ ಶಾಸನ ಪದ್ಧತಿಗೆ ಅನುಗುಣವಾಗಿ ಯಳಂದೂರು ೧೮೫೬ರಲ್ಲಿ ಸರ್ಕಾರದ ಆಳ್ವಿಕೆಗೆ ಒಳಪಟ್ಟಿತು.

ಯಳಂದೂರಿನ ಇತಿಹಾಸ ಪರಂಪರೆಗಳನ್ನು ಅರಿಯುವಲ್ಲಿ ಇಲ್ಲಿ ದೊರೆತಿರುವ ಶಾಸನಗಳ ಪಾತ್ರ ಬಹಳ ಮುಖ್ಯವಾದದ್ದು. ಈ ಗ್ರಾಮದ ಒಳಗೆ ಸುಮಾರು ಹತ್ತು ಶಾಸನಗಳು ದೊರೆತಿದ್ದು ಇವುಗಳಲ್ಲಿ ಕೆಲವೊಂದು ತಮಿಳು ಲಿಪಿಯಲ್ಲಿವೆ.

೧. ಈಶ್ವರ ದೇವಾಲಯದ ಹೊರಪ್ರಕಾರದಲ್ಲಿ ಪೂರ್ವಕಡೆ ನೆಟ್ಟಕಲ್ಲು (೧೨೪೪-೪೫ ಕ್ರಿ.ಶ). ಈ ಶಾಸನವು ತಮಿಳು ಲಿಪಿಯಲ್ಲಿದ್ದು ಹೊಯ್ಸಳ ಅರಸ ಸೋಮೇಶ್ವರನ ಬಗ್ಗೆ ತಿಳಿಸುತ್ತದೆ.

೨. ಈಶ್ವರ ದೇವಾಲಯದ ತಳಪಾಯದ ಕಲ್ಲಿನಲ್ಲಿ (೧೨೫೧ ಕ್ರಿ.ಶ. ಫೆಬ್ರವರಿ ೧೨). ಈ ಶಾಸನ ಸಹ ತಮಿಳಿನಲ್ಲಿಯೇ ಇದ್ದು ೧೧೭೨ರಲ್ಲಿ ಆಳ್ವಿಕೆ ನಡೆಸಿದ ಹೊಯ್ಸಳ ಸೋಮೇಶ್ವರನ ಆಳ್ವಿಕೆಯನ್ನು ಪೂರ್ವವಾಗಿ ವಿವರಿಸುತ್ತದೆ.

೩. ಮನೆಯೊಂದರ ಹಿತ್ತಲಲ್ಲಿರುವ ಕಲ್ಲು (೧೨೬೬ ಕ್ರಿ.ಶ.) ಈ ಶಾಸನವು ತಮಿಳು ಲಿಪಿಯಲ್ಲಿದ್ದು ಹೊಯ್ಸಳರ ಮತ್ತೊಬ್ಬ ದೊರೆ ವೀರನರಸಿಂಹನ ದಂಗೆಯ ವಿಚಾರವನ್ನು ಹಾಗೂ ಆತ ಹುಲಿಯನ್ನು ಕೊಂಡ ವಿಚಾರವನ್ನು ತಿಳಿಸುತ್ತದೆ.

೪. ಗೌರೀಶ್ವರ ದೇವಾಲಯದ ಪ್ರಾಕಾರದಲ್ಲಿ ದಕ್ಷಿಣ ಕಡೆ ಮಂಟಪದಲ್ಲಿರುವ ಶಾಸನ (೧೫೬೮-೬೯) ಈ ಶಾಸನವು ನಾಗಾಕ್ಷರದಲ್ಲಿದ್ದು ಇದನ್ನು ಹದಿನಾಡ ಅರಸ ಮುದ್ದುಭೂಪನು ಬರೆಯಿಸಿದನು. ಈ ಶಾಸನದಲ್ಲಿ ಅಲ್ಲಿನ ಪ್ರಮುಖ ದೇವಾಲಯವಾದ ಗೌರೀಶ್ವರ ದೇವಾಲಯದ ನಿರ್ಮಾಣ, ಆ ದೇವರು ಶ್ವೇತಯುಗ, ತ್ರೇತಾಯುಗ, ದ್ವಾಪರಯುಗ ಮತ್ತು ಕಲಿಯುಗವನ್ನು ಪಡೆದ ಜನ್ಮವನ್ನು ತಿಳಿಸುತ್ತದೆ.

೫. ಕಾರೇಪುರ ಮಠದ ತಾಮ್ರಶಾಸನ (೧೭೭೫ ಕ್ರಿ.ಶ. ಆಗಸ್ಟ್)

೬. ಗೌರೀಶ್ವರ ದೇವಾಲಯದ ತಳಪಾದಿಯ ಕಲ್ಲಿನಲ್ಲಿ

೭. ಗೌರೀಶ್ವರ ದೇವಾಲಯದ ಪಾಠಶಾಲೆಯ ಕಂಬದಲ್ಲಿ (೧೪ನೇ ಶತಮಾನ) ಇದು ಸಹ ತಮಿಳು ಶಾಸನವಾಗಿದ್ದು ವೀರಬಲ್ಲಾಳ ಎಂಬಾತನು ನಿರ್ಮಿಸಿದನೆನ್ನಲಾಗಿದೆ.

೮. ಅದೇ ದೇವಾಲಯದ ಹಿಂದೆ ಪಂಚಲಿಂಗ ಶಾಲೆಯ ಐದು ಗರ್ಭಗೃಹಗಳ ದ್ವಾರಗಳ ಮೇಲ್ಗಡೆ ತೊಲೆಗಳ ಮೇಲೆ (೧೭ನೇ ಶತಮಾನ).

೯. ಹೊನ್ನುಹೊಳೆಯ ಸೋಪಾಲಘಟ್ಟದ ಕಲ್ಲೊಂದರ ಮೇಲೆ (೧೭ನೇ ಶತಮಾನ).

೧೦. ಗೌರೀಶ್ವರ ದೇವಾಲಯದ ಗೋಪುರದ ಎಡಪಾರ್ಶ್ವದಲ್ಲಿ (೧೭ನೇ ಶತಮಾನ).[೧]

ಈ ಮೇಲ್ಕಂಡ ಶಾಸನಗಳನ್ನು ಗಮನಿಸಿದಾಗ ಯಳಂದೂರು ಅನೇಕ ರಾಜವಂಶಗಳ ಆಳ್ವಕೆಗೆ ಒಳಗಾಗಿತ್ತು ಎಂಬುದನ್ನು ಅರಿಯಬಹುದು ಹಾಗೂ ಇದು ತಮಿಳುನಾಡಿನ ಗಡಿಭಾಗವಾದ ಚಾಮರಾಜನಗರ ಜಿಲ್ಲೆಗೆ ಸೇರಿದ ತಾಲ್ಲೂಕು ಆಗಿರುವುದರಿಂದ ಹಲವು ತಮಿಳು ರಾಜಮನೆತನಗಳು ಈ ಗ್ರಾಮವನ್ನು ತಮ್ಮ ಅಧಿಪತ್ಯಕ್ಕೆ ಒಳಪಡಿಸಿಕೊಂಡಿದ್ದರು ಎಂಬುದನ್ನು ಅರಿಯಬಹುದು.

ಯಳಂದೂರಿನ ಕೇಂದ್ರಭಾಗದಲ್ಲಿ ನಿರ್ಮಿತವಾಗಿರುವ ಜಹಗೀರುದಾರ ಬಂಗಲೆಗಳು ಮೈಸೂರಿನ ಅರಸರಾದ ಹೈದರಾಲಿ, ಟಿಪ್ಪು ಮತ್ತು ಒಡೆಯರ ನೇರ ಆಳ್ವಿಕೆ ಈ ಪ್ರದೇಶದ ಮೇಲೆ ಇದ್ದುದ್ದಕ್ಕೆ ಸಾಕ್ಷಿಯಾಗಿವೆ.

---

೧. ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ-೪, (ಬಿ.ಎಲ್.ರೈಸ್ ಸಂ.), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

# ಅಧ್ಯಾಯ ೪

# ಯಳಂದೂರಿನ ಮೌಖಿಕ ಜಾನಪದ

ಯಾವುದೇ ಒಂದು ಜನಸಮುದಾಯದಲ್ಲಿನ ಜೀವನ ಪದ್ಧತಿ, ಆಚರಣೆ, ನಂಬಿಕೆ, ಸಂಪ್ರದಾಯಗಳು ಸೇರಿದಂತೆ ಅಲ್ಲಿನ ಆಟ, ಅಡುಗೆ, ಮೌಖಿಕ ಸಾಹಿತ್ಯ, ಕರಕುಶಲ ಕಲೆ ವಸ್ತುಗಳೆಲ್ಲವನ್ನು ಜಾನಪದವೆಂದು ಕರೆಯಲಾಗಿದೆ. ಆದಿಮಾನವನ ಕಾಲದಿಂದ ಹಿಡಿದು ಆಧುನಿಕ ಕಾಲದ ನಾಗರೀಕ ಮಾನವನ ಸಮುದಾಯಗಳಲ್ಲಿ ಜಾನಪದ ಅಳಿಯದೇ ಉಳಿದುಕೊಂಡು ಬಂದಿದೆ. ಭಾಷೆಗೆ ಲಿಪಿ ಕಾಣಿಸಿಕೊಳ್ಳದ ಪೂರ್ವಕಾಲದಲ್ಲಿ ಮಾನವ ಸಮಾಜದ ಎಲ್ಲಾ ವರ್ತನೆಗಳು ಮೌಖಿಕವಾಗಿಯೇ ಅಭಿವ್ಯಕ್ತವಾಗುತ್ತಿದ್ದವು.

ಭಾಷೆಗೆ ಲಿಪಿ ಬಂದಮೇಲೆ ಸಮಾಜದಲ್ಲಿ ತೀವ್ರತರ ಬದಲಾವಣೆಗಳಾದವು. ಅಕ್ಷರ ಬಲ್ಲವರು ಮತ್ತು ಅನಕ್ಷರಸ್ಥರು ಎಂಬ ಎರಡು ವರ್ಗಗಳೆ ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದವು ಹಿಂದಿನಿಂದ ಬಂದುದು ಅಕ್ಷರವಂತರಲ್ಲಿ ಪರಿಷ್ಕಾರಗೊಂಡು ಹೊಸ ರೂಪ ಪಡೆದಂತೆಲ್ಲ ಶಿಷ್ಟಪದವಾಯಿತು. ಒಂದೇ ಸಮುದಾಯದಲ್ಲಿಯೇ ಅನಕ್ಷರಸ್ಥರ ಬದುಕು ಜಾನಪದವೆಂತಲೂ, ಅಕ್ಷರಸ್ಥರದು ಶಿಷ್ಟಪದವೆಂತಲೂ ಗುರುತಿಸಲ್ಪಟ್ಟಿತು. ಅದೇನೇ ಇದ್ದರೂ 'ಜನಪದ'ಕ್ಕೆ ಹೆಚ್ಚಿನ ಮಹತ್ವವಿರುವುದಂತೂ ನಿಜ.

ಈ ಹಿನ್ನೆಲೆಯಲ್ಲಿ 'ಜಾನಪದ' ತುಂಬ ಪ್ರಾಚೀನವೂ ಆಧುನಿಕ ಜೀವನಕ್ಕೆ ಪ್ರೇರಕವೂ ಆಗಿದೆ. ಜನಪದ ಸಾಹಿತ್ಯವನ್ನು ಹಾಡು, ಕಥೆ, ಒಗಟು, ಗಾದೆ ಎಂದು ವಿಭಾಗಿಸಿ, ಹಾಡುಗಳನ್ನು ಗಂಡಸರ ಹಾಡು ಮತ್ತು ಹೆಂಗಸರ ಹಾಡುಗಳೆಂದು ಪುನಃ ಎರಡು ವಿಭಾಗಗಳಾಗಿ ವಿಂಗಡಿಸುತ್ತಾರೆ. ಗಂಡಸರ ಹಾಡುಗಳಲ್ಲಿ ಲಾವಣಿ, ವಿನೋದದ ಪದಗಳು. ವಿಶೇಷ ಪದಗಳು ಎಂದು ಮೂರು ಒಳಗುಂಪುಗಳನ್ನು, ಹೆಂಗಸರ ಹಾಡುಗಳಲ್ಲಿ ಬ್ರಾಹ್ಮಣಿ ಹಾಗೂ ಶೂದ್ರಾಣಿಯರ ಹಾಡುಗಳೆಂದು ಎರಡು ಒಳಗುಂಪುಗಳನ್ನು ಹೆಸರಿಸುತ್ತಾರೆ.

ಜನಪದ ಸಾಹಿತ್ಯದಲ್ಲಿ 'ಗೀತೆ'ಗೆ ಪ್ರಮುಖ ಸ್ಥಾನವಿದೆ. ಜನಪದ ಗೀತೆಗಳು ನಿತ್ಯ ಜೀವನದ ಸಮಸ್ತ ಚಿತ್ರಣಗಳನ್ನು ದಾಖಲಿಸಿವೆ. ಹಿಂದೆ ಯಳಂದೂರಿನ ಸುತ್ತಮುತ್ತ ಹಳ್ಳಿಗರ ಪ್ರತಿಯೊಂದು ಕೆಲಸಕಾರ್ಯಗಳು ಸಾಗುವುದು ಹಾಡಿನ ಮೂಲಕವೇ, ಕುಟ್ಟುವುದು ಬೀಸುವುದರಿಂದ ಹಿಡಿದು, ಬೇಸಾಯದ ಸಮಸ್ತ ಕಾರ್ಯಗಳಿಗೂ ಗೀತೆ ಜೊತೆ ಜೊತೆಯಾಗಿ ನಿಲ್ಲುತ್ತಿತ್ತು.

ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ೬೫ ವರ್ಷದ ಪುಟ್ಟ ನಂಜಮ್ಮನವರು ತಾವೇ ರಚಿಸಿಕೊಂಡು ಹೇಳಿದ ಹಾಡು ಈ ರೀತಿ ಇದೆ.

೧. ಮಗಳು : ಅತ್ತಿಗೆ ನೆಂಟಲ್ಲ, ಹಿತ್ತಾಳೆ ಕಪ್ಪಲ್ಲ
ಹುಟ್ಟಿದ ಮನೆ ಸ್ಥಿರವಲ್ಲ ತಾಯಮ್ಮ
ಮುತ್ತಿಗದ ಮರ ನೆರಳಲ್ಲ
ಅಣ್ಣನ ಮನೆಗೆ ಹೆಣ್ಣು ಕೇಳಲು ಬಂದಿ
ಅಣ್ಣನ ಹೆಡುತಿ ಗಣುಕಾತಿ ಅತ್ತಿಗಮ್ಮ
ಸುಣ್ಣದ ತಿಳಿಯ ಒಲೆ ಮೇಲೆ ಎತ್ಕೊಂಡು
ಎಮ್ಮೆ ಹಾಲು ಅಂಥ ಎರೆದಾಳು
ಎಮ್ಮೆ ಹಾಲಲ್ಲ ಹಸುವಿನ ಮೊಸರಲ್ಲ
ನಮ್ಮ ತಾಯಮ್ಮಲ್ಲದ ಮೇಲೆ ತವರಲ್ಲ

ಒಡಹುಟ್ಟಿದ ಅಣ್ಣ ನಮ್ಮನವನೇ ಆದರೂ ಹೊರಗಿನಿಂದ ಬಂದ ಅತ್ತಿಗೆ ನಮ್ಮವಳಾಗಲು ಸಾಧ್ಯವಿಲ್ಲ ಎನ್ನುವುದಕ್ಕೆ ಜನಪದರು ಈ ರೀತಿ ಹಾಡು ಹೇಳಿ ತಮ್ಮ ಅನಿಸಿಕೆಯನ್ನು ಹೇಳಿಕೊಳ್ಳುತ್ತಿದ್ದರು.

'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎನ್ನುವಂತೆ ಮದುವೆಯಾದ ಹೆಣ್ಣು ಮಗಳಿಗೆ ಯಾವಾಗಲೂ ತಾಯಿಯ ಮನೆ ಸ್ಥಿರವಲ್ಲ. ಅದರಲ್ಲೂ ತಾಯಿ ಸತ್ತ ಮೇಲಂತು ಅವಳು ಶಾಶ್ವತವಾಗಿ ಅಪ್ಪನ ಮನೆಯನ್ನು ಮರೆಯಬೇಕಿತ್ತು. ಆದರೂ ಪ್ರೀತಿಯಿಂದ ತನ್ನ ಮಗನಿಗೆ ಹೆಣ್ಣು ಕೇಳಲು ಅಣ್ಣನ ಮನೆಗೆ ಹೋದಾಗ ಅತ್ತಿಗೆ ಬೇಕಾಬಿಟ್ಟಿಯಾಗಿ ಒಲೆಯ ಮೇಲಿದ್ದ ತಿಳಿ ಹಾಲನ್ನು ನೀಡುತ್ತಾಳೆ. ಆಗ ಮಗಳಿಗೆ ತನ್ನ ತಾಯಿಯ ನೆನಪಾಗಿ ದುಃಖಿಸುತ್ತಾ ತನ್ನ ಮನೆಯೇ ಶಾಶ್ವತವೆಂದು ಹಿಂದಿರುಗುತ್ತಾಳೆ. ಏನೇ ಆದರೂ ತಾಯಿ ತಾಯಿಯೇ, ಅತ್ತಿಗೆ ಅತ್ತಿಗೆಯೇ ಎಂಬುದನ್ನು ತಿಳಸಿದ್ದಾರೆ.

೨. ತಂಗಿ : ಹೊಳೆಯ ಕಡೆಯಲ್ಲಿ ಹೊಂಗೆಯ ತೋಪಲ್ಲಿ
ಶಿವಗಂಗೆಯಲ್ಲಿ ಮೊಕವ ತೊಳೆಯವನೆ ಅಣ್ಣಯ್ಯ
ಹಬ್ಬ ಎಂದಯ್ಯ ತೌರಲ್ಲಿ

ಅಣ್ಣ: ಹಬ್ಬ ಕೇಳೀಯ ಹರಿದೀನ ಕೇಳೀಯ
ಹಬ್ಬ ನಾಳೆಂದು ಒಂದಾಳ ಕಳುವೇನು

ತಂಗಿ: ಆಳು ಕಳುಹಿದರೆ ಆಡುಕಳುವರಯ್ಯ
ಆಳು ಪಲ್ಲಕ್ಕಿ ಹಿಡಿದೋರ ಸೈವಾಗ
ನೀಮೆ ಬಾರಣ್ಣ ಕರೆಯಾಕೆ

ಒಡಹುಟ್ಟಿದ ಅಣ್ಣ, ತಂಗಿಯ ಮನೆಗೆ ಹೋದಾಗ ಯೋಗಕ್ಷೇಮದ ನಂತರ ತಂಗಿಯು ಅಣ್ಣನನ್ನು ತೌರೂರಿನ ಹಬ್ಬ ಯಾವತ್ತು? ಎಂದು ಕೇಳಿದಾಗ ಅವನು ಹೇಳದೆ ಹಬ್ಬದ ಹಿಂದಿನ ದಿನ ಆಳನ್ನು ಕಳಿಸುತ್ತೇನೆ ಆಗ ನೀನು ಬಾ ಎನ್ನುವುದು. ಅದಕ್ಕೆ ಅವಳು ಆಳನ್ನು ಕಳುಹಿಸಿದರೆ ನನ್ನ ಗಂಡನ ಮನೆಯವರು ಆಡಿಕೊಳ್ಳುತ್ತಾರೆ. ಆದ್ದರಿಂದ ನೀನೆ ಬಾ ಎಂದು ಬೇಡಿಕೊಳ್ಳುತ್ತಾಳೆ.

ಹೀಗೆ ತಂಗಿ ತನ್ನ ಅಣ್ಣನ ಜೊತೆ ಸಲಿಗೆಯಿಂದ ಕಷ್ಟ, ಸುಖವನ್ನು ಹೇಳಿಕೊಳ್ಳುತ್ತಿದ್ದಳು. ಜೊತೆಗೆ ತನ್ನ ಗಂಡನ ಮನೆಯ ಮರ್ಯಾದೆಯನ್ನು ಉಳಿಸಿಕೊಳ್ಳುತ್ತಿದ್ದಳು. ಅಣ್ಣನಾದವನು ತಂಗಿಯ ಮನೆಗೆ ಹೋಗಿ ಕರೆದರೆ ಆಗ ಗಂಡನ ಮನೆಯವರು ಬೆಲೆಕೊಟ್ಟು ಕಳುಹಿಸಿಕೊಡುತ್ತಿದ್ದರು. ಇದರಿಂದ ತಂಗಿಗೆ ತೌರು ಮನೆಗೆ ಹೋಗುವ ಭಾಗ್ಯ ದೊರಕುತ್ತಿತ್ತು. ಜೊತೆಗೆ ಹೆತ್ತ ತಾಯಿ, ತಂದೆಯನ್ನು ನೋಡುವ ಭಾಗ್ಯವು ದೊರಕುತ್ತಿತ್ತು. ಈ ಎಲ್ಲಾ ಆಸೆಯಿಂದ ಅಣ್ಣನನ್ನು ಬೇಡಿಕೊಳ್ಳುತ್ತಿದ್ದಳು.

೩. ತಾಯಿ : ಹೆಣ್ಣು ಹೆರಬೇಡ ನೆರೆ ಮನೆಗೆ ಕೊಡಬೇಡ
ಹಗೆಯವರ ಮುಂದೆ ಅಳಬೇಡ ತಾಯಮ್ಮ
ಹಗೆತನದವರು ನಗುತಾರೆ
ಹೆಣ್ಣು ಹೆತ್ತಮ್ಮನಿಗೆ ಬಣ್ಣಗೇಡು ಬಾಳುಗೇಡು
ಕಣ್ಣೀರು ಕೇಡು ಸಿರ್‍ಗಿಗೆ

ಮಗಳು : ಏಲಕ್ಕಿ ಗಿಡಹುಟ್ಟಿ ಎಲೆಗೊಂದು ಕಾಯಿಬಿಟ್ಟು
ಪಚ್ಚ ಮಾರುಟ್ಟಿ ಫಲವೇನು? ತಾಯಮ್ಮ
ನಾನುಟ್ಟಿ ನಿಮಗೆ ಸುಖವೇನು

ತಾಯಿ: ಹೆಣ್ಣು ಸಿರಿದೇವಿ ನೆರೆಮನಗೆ ತಾಯಮ್ಮ
ಗಂಡು ನಮ್ಮ ಮನೆಗೆ ತೊಲೆಕಂಬ
ಏರಿಯ ಕೆಳಗೆ ಏಳು ತೆಂಗಿನಮರ
ಬೇರಿನ ಕೆಳಗೆ ಎಳನೀರು ಮೊಗೆಯೋಳೆ

ಹೆಣ್ಣು ಹೆತ್ತ ತಾಯಿ ತನ್ನ ಮಗಳಿಗೆ ಗಂಡನ ಮನೆಗೆ ಹೋಗುವಾಗ ಕೆಲವು ಹಿತ ನುಡಿಗಳನ್ನು ಹೇಳುತ್ತಿದ್ದಳು. ಅದು ಹೆಣ್ಣನ್ನು ಹೆರಬೇಡ ಏಕೆಂದರೆ ನಾನು ಪಡುವ ಕಷ್ಟವನ್ನೇ ನೀನು ಪಡುವುದುಬೇಡವೆಂದು. ಒಂದು ಪಕ್ಷ ಹೆತ್ತರೂ ಅಕ್ಕಪಕ್ಕ ಮನೆಗಳಿಗೆ ಕೊಡಬೇಡವೆಂದು ಹೇಳುತ್ತಾಳೆ.

ಇಂದಿನ ವೈಜ್ಞಾನಿಕದಂತೆ ಹತ್ತಿರ ಸಂಬಂಧಿಗಳಿಗೆ ಹೆಣ್ಣನ್ನು ಕೊಡಬಾರದೆಂದು ತಿಳಿದುಬಂದಿದೆ. ಏಕೆಂದರೆ ಆ ಹೆಣ್ಣು, ಗಂಡಿಗೆ ಹುಟ್ಟಿದ ಮಗು ಅಂಗವಿಕಲವಾಗುವ ಸಂಭವವಿರುವ ಕಾರಣ ಇದು ತಿಳಿದೊ ಅಥವಾ ತಿಳಿಯದೋ ತಾಯಿ ತನ್ನ ಮಗಳಿಗೆ, ಹತ್ತಿರ ಸಂಬಂಧಗಳಿಗೆ ಹೆಣ್ಣನ್ನು ಕೊಡಬೇಡವೆಂದು ಹೇಳುವುದರ ಜೊತೆಗೆ ಅದರ ಕಷ್ಟಸುಖವನ್ನು ಕಣ್ಣಾರೆ ನೋಡಬೇಕಾಗುತ್ತದೆ. ಆ ಕಾರಣದಿಂದ ಪರಸ್ಥಳಕ್ಕೆ ಮಗಳನ್ನು ಕೊಡು ಎಂದು ಈ ರೀತಿ ಹೇಳಿರಬಹುದು.

ಅಷ್ಟೇ ಅಲ್ಲದೆ ಎಷ್ಟೇ ಕಷ್ಟ ಬಂದರೂ ಗಂಡನ ಮನೆಯಲ್ಲಿ ಅಳಬೇಡ ಏಕೆಂದರೆ ನಮಗಾಗದವರು ನಿನ್ನನ್ನು ನೋಡಿ ನಗುತ್ತಾರೆ. ಇದರಿಂದ ನಿನ್ನ ಹೆತ್ತ ತಾಯಿಯಾದ ನಾನು ನೆಮ್ಮದಿಯಿಂದ ಇರಲು ಸಾಧ್ಯವಿಲ್ಲವೆಂದು ತಾಯಿ ಮಗಳಿಗೆ ಹಿತ ನುಡಿಯನ್ನು ಹೇಳಿ ಗಂಡನ ಮನೆಗೆ ಕಳುಹಿಸುವಾಗ ಮಗಳು ತಾಯಿಗೆ ಈ ರೀತಿ ಹೇಳುತ್ತಾಳೆ. ನಾನು ಹೆಣ್ಣಾಗಿ ಹುಟ್ಟಿ ನಿಮಗೆ ಸುಖಕ್ಕಿಂತ ಕಷ್ಟವನ್ನೇ ತಂದುಬಿಟ್ಟೆ ಎಂದು ಹೇಳುವಾಗ ಅಂದಿನ ಹೆಣ್ಣಿನ ಸ್ಥಿತಿ ನಮಗೆ ಅರಿವಾಗುತ್ತದೆ. ಅದಕ್ಕೆ ತಾಯಿ ಸಮಾಧಾನ ಪಡಿಸುತ್ತಾ ಹೆಣ್ಣು ಒಂದು ಮನೆಯಲ್ಲಿ ಇದ್ದರೆ ಲಕ್ಷ್ಮಿ ಇದ್ದಂತೆ ಹಾಗೆಯೇ ಗಂಡು ಮಗು ಇದ್ದರೆ ಮನೆಯ ಕಷ್ಟಸುಖಕ್ಕೆ ಭಾಗಿಯಾಗುತ್ತಾನೆ ಎಂದು ತಾಯಿ ಮಗಳನ್ನು ಸಮಾಧಾನಪಡಿಸಿರುವುದನ್ನು ಕಾಣುತ್ತೇವೆ.

೪. ಅಕ್ಕ : ನಾಗಾರ ಜಡೆಯ ತಂಗಮ್ಮ
ನಿನ್ನ ಜಾಣ ಪುರುಷಾನ ಹೆಸರೇಳು ॥೨॥ ತಂಗಮ್ಮ

ತಂಗಿ : ಹೆಸರೇನ ಹೇಳಾಲಿ ಹಸನಾದ ಅಕ್ಕಯ್ಯ
ಕುಶಲ ಕಾಣ ಅಕ್ಕ ನಿನ್ನ ಮೈದ

ಹಿರಿಯ ಸ್ಥಾನದಲ್ಲಿದ್ದ ಅಕ್ಕ ತಂಗಿಯ ಮದುವೆಯಾದ ನಂತರ ಅವಳಲ್ಲಿದ್ದ ನಾಚಿಕೆಯನ್ನು ಹೋಗಲಾಡಿಸಲು ನಿನ್ನ ಜಾಣ ಗಂಡನ ಹೆಸರೇನು ಎಂದು ಕೇಳಿದಾಗ ಅದಕ್ಕೆ ನವವಧು ಹೆಸರನ್ನು ಹೇಳದೆ, ಆತ ಬುದ್ಧಿವಂತ ಎಂದು ಮಾತ್ರ ಹೇಳುವುದನ್ನು ಇದರಲ್ಲಿ ಕಾಣುತ್ತೇವೆ.

ಹಿಂದೆ ನಾಲ್ಕು ಗೋಡೆಗಳ ಮಧ್ಯೆಯಿದ್ದ ಹೆಣ್ಣು ಮಕ್ಕಳಿಗೆ ಪರ ಪುರುಷನ ಜೊತೆ ಮದುವೆಯಾದಾಗ ಅವರಿಗೆ ಸಲುಗೆ ಬರುತ್ತಿರಲಿಲ್ಲ. ಹಾಗಾಗಿ ಅವರಲ್ಲಿದ್ದ ನಾಚಿಕೆಯನ್ನು ಹೋಗಲಾಡಿಸಲು ಮದುವೆಯಲ್ಲಿ ಕೆಲವು ಪಂದ್ಯಗಳನ್ನು ಆಡಿಸುವುದರ ಮೂಲಕ ಅವರಿಬ್ಬರಲ್ಲು ಹೊಂದಾಣಿಕೆ ಮಾಡುತ್ತಿದ್ದರು.

ಹೀಗೆ ಹಿಂದಿನಿಂದಲೂ ಜನರು ಮೌಖಿಕದಲ್ಲೇ ಪ್ರಾಸ ಬರುವ ಹಾಗೆ ರಚನೆ ಮಾಡಿ ತಮ್ಮ ಬುದ್ಧಿವಂತಿಕೆಯನ್ನು ಮೆರೆದಿರುವುದನ್ನು ಕಾಣುತ್ತೇವೆ. ಈ ಭಾಗದ

ಜನಪದರು ಪ್ರತಿಹಂತದಲ್ಲೂ ಹಾಡಿನ ಮೂಲಕ ತಮ್ಮ ಅಭಿಪ್ರಾಯವನ್ನು ಹೇಳಿಕೊಳ್ಳುತ್ತಿದ್ದರೆಂಬುದನ್ನು ಮೇಲಿನ ಹಾಡುಗಳ ಮೂಲಕ ತಿಳಿದುಕೊಳ್ಳಬಹುದು.

ಹಾಗೆಯೇ ಸೋಬಾನೆ ಪದಗಳನ್ನು ಮದುವೆ ಸಮಾರಂಭಕ್ಕೆ ಹಾಡುವುದನ್ನು ಗಮನಿಸುತ್ತೇವೆ. ಈ ಭಾಗದ ಜನ ಈ ರೀತಿ ಸೋಬಾನೆ ಪದಗಳನ್ನು ಹಾಡುತ್ತಾರೆ.

ಸೋಬಾನೆ ಎಲ್ಲ ಶಿವನಿಗೆ ಸೋಬಾನೆ
ಸೋಬಾನೆ ಎನುವುದು ಎಲ್ಲಿಗಂಟ ಇರುವುದು
ಮಲ್ಲಯ್ಯ ಕಟ್ಟಿರುವ ಗಿರಗಂಟ ಸೋಬಾನೆ
ಕಾರು ಮಳೆಯಾಗ ಕರೆದ್ಯಾವೊ ಸೋಬಾನೆ
ಮುತ್ತಿನ ಹಸೆಮಣೆಯ ಯಾವಮ್ಮ ಕಳುಗಿದ ಸೋಬಾನೆ
ಈಸೂರು ಮಲ್ಲಯ್ಯನ ಮಡದಿ ಗಿರಿಜಮ್ಮ
ಮುತ್ತಿನ ಹಸೆಮಣೆಯ ಕಳುಗಿದ ಸೋಬಾನೆ
ಬಡಕಲು ಅಟ್ಲುಗ ಬೆಡುಗನ ಏಣಿಯೂಡಿ ಮುತ್ತಿನ
ಹಸೆಮಣೆ ಇರಸಿರೆ ಸೋಬಾನೆ
ನಕ್ಷತ್ರ ನೂರು ಗಿಡನೂರು ಸಾಮಣಯ ತಂದು ಇರಿಸಿರೇ
ಮುತ್ತೈದೆಯರು ಸೋಬಾನೆ
ನಕ್ಷತ್ರ ನುರು ಗಿಡ ನೂರು ಸಾಮಣಿಯ ಬೆಟ್ಟು ಸೋಕಿದರೆ
ಧಣಿರೆಂದು ಸೋಬಾನೆ
ಎಣ್ಣೆ ಎರೆಯೀರಿ ಚೆನ್ನ ಕುಮಾರನಿಗೆ
ಗಂಗಮ್ಮ ಪಡೆದ ಮಗನಿಗೆ ಸೋಬಾನೆ
ಗಂಗಮ್ಮ ಪಡೆದ ಮಗನಿಗೆ ಮದುವಯ್ಯನಿಗೆ ಎಣ್ಣೆ ಎರೆವಾಗ
ಸೀಗೆ ಎರೆಯಾರಿ ಸೀತೆ ಕುಮಾರನಿಗೆ
ಸೀತಮ್ಮ ಪಡೆದ ಮಗನಿಗೆ ಸೋಬಾನೆ
ಸೋಬಾನೆ ಎಲ್ಲ ಶಿವನಿಗೆ ಸೋಬಾನೆ
ಸೀತಮ್ಮ ಪಡೆದ ಮಗನಿಗೆ ಮದುವಯ್ಯನಿಗೆ
ಸೀಗೆ ಎರೆಯಾರಿ ಬೆಳಗಾದು

ಸೋಬಾನ ಸೋಬಾನ ಎಲ್ಲ ಶಿವನಿಗೆ ಸೋಬಾನೆ

ಗಂಧ ಎರೆಯಾರಿ ನಂದಿ ಕುಮಾರನಿಗೆ

ಊರು ದೊಡ್ಡವರ ಮಗನು ಮದುವಯ್ಯನಿಗೆ

ಗಂಧ ಎರೆಯಾರೆ ಬೆಳಗಾದು ಸೋಬಾನೆ

ಸೋಬಾನೆ ಶಿವನಿಗೆ ಸೋಬಾನೆ

ಅಟ್ಟೆಣ್ಣೆ ಚಿಟ್ಟೆಣ್ಣೆ ಮೂರು ಮಾನ ಒಳ್ಳೆಣ್ಣೆ ನಾರಿ ನಿಮ್ಮ ಕೈನ

ಉಗುರೆಣ್ಣೆ, ನಾರಿ ನಿಮ್ಮ ಕೈನ ಉಗುರೆಣ್ಣೆ ಚಿಗರೆಣ್ಣೆ ಚೆನ್ನಾಗಿ

ಬರಲಿ ನಿಮ್ಮ ಕೈಯಲಿ

ಮುಡುವಾಳ ಹಾಕಿ ಗಮಗಮನ ಕಾದವೇ ಎರೆಯಾರ ಕಂದಯ್ಯನ

ಸಿರಿ ಮುಡುಗೆ ಎರೆಯಾರಿ ಕಂದಯ್ಯನ ಸಿರಿ ಮುಡುಗೆ ಮದುವಯ್ಯನಿಗೆ

ಆಜ್ಞೆ ಎರೆಯಾರಿ ಬೆಳಗಾದು ಸೋಬಾನೆ

ಸೋಬಾನೆ ಎಲ್ಲ ಶಿವನಿಗೆ ಸೋಬಾನೆ

ಇಂದು ನಮ್ಮಲ್ಲಿ ಚಿನ್ನದ ಶಾಸ್ತ್ರವು ಎಲ್ಲ ದೇವಮಾನ್ಯ ಬರಬೇಕು

ನಮ್ಮ ಮನೆಗೆ

ಇಂದು ನಮ್ಮಲ್ಲ ಕಂದಯ್ಯ ಮೀದ ನೀರು ಬಾಗಲದಾಟಿ

ಹೊಳೆದಾಟಿ ಸೋಬಾನೆ

ಬಾಗಿಲ ದಾಟಿ ಹೊಳೆದಾಟಿ ಆ ನೀರು ನಿಂಬೆವಾಲಾಡಿ ಬೆಳೆದಾವು ಸೋಬಾನೆ

ನಿಂಬೆ ವಾಲಾಡಿ ಬೆಳೆದಾವು ಸೋಬಾನೆ

ಸೋಬಾನೆ ಎಲ್ಲ ಶಿವನಿಗೆ ಸೋಬಾನೆ

ಸೋಬಾನೆ ಹಾಡುವ ಮೊದಲು ಕುಲ ದೇವರನ್ನು ಪ್ರಾರ್ಥಿಸಿಕೊಳ್ಳುತ್ತಿದ್ದರು. ಹಸೆಮಣೆ ಎಲ್ಲ ಮನೆಯಲ್ಲಿಯೂ ಇರುತ್ತಿರಲಿಲ್ಲ. ಹಾಗಾಗಿ ಮದುವೆ ಸಮಾರಂಭದ ಸಮಯದಲ್ಲಿ ಯಾರ ಮನೆಯಿಂದಲಾದರೂ ತೆಗೆದುಕೊಂಡು ಬರುತ್ತಿದ್ದರು. ಹಾಗಾಗಿ ಅದನ್ನು ಕೊಟ್ಟ ಮುತ್ತೈದೆಯನ್ನು ನೆನೆಪು ಮಾಡಿಕೊಳ್ಳುತ್ತಾ ಹಸೆಮಣೆಯ ಚಿತ್ರವನ್ನು ನೋಡಿ ಹಾಡನ್ನು ಹೇಳುತ್ತಿದ್ದರು. ಹುಡುಗನಿಗೆ ಎಣ್ಣೆಯನ್ನು ಎರೆಯುತ್ತಾ ಆತನ ತಾಯಿಯನ್ನು ಸೀತೆಗೆ ಹೋಲಿಕೆ ಮಾಡುತ್ತಾ ಹುಡುಗನ ತಾಯಿಯನ್ನು ಹೊಗಳುತ್ತಿದ್ದರು.

ಆ ನಂತರ ಗಂಧವನ್ನು ಎರೆಯುತ್ತಾ ತಾಯಿ ಮತ್ತು ಮಗನ ಸಂಬಂಧವನ್ನು ಸೀತೆ ಮತ್ತು ಮಗನ ಸಂಬಂಧದಂತೆ ಎಂದು ಹೇಳುತ್ತಾ ಬಿಸಿ ಬಿಸಿ ನೀರನ್ನು ಹುಡುಗನಿಗೆ ಹಾಕುತ್ತಿದ್ದರು. ಆ ನೀರು ಬಾಗಿಲ ದಾಟಿ, ಹೊಳೆದಾಟಿ ನಿಂಬೆ ಗಿಡಕ್ಕೆ ಬಿದ್ದು ಇದರಿಂದ ನಿಂಬೆ ಹಣ್ಣು ಹೆಚ್ಚು ಬೆಳೆದಂತೆ, ಹೆಣ್ಣು ಗಂಡಿನ ಜೀವನ ಉತ್ತಮವಾಗಿ ಅವರಿಗೆ ಹೆಚ್ಚು ಮಕ್ಕಳು ಜನಿಸಲೆಂದು ಹಾರೈಸುತ್ತ ಹಲವು ಶಾಸ್ತ್ರಗಳನ್ನು ಮಾಡುತ್ತ ಸೋಬಾನೆ ಗೀತೆ ಹಾಡುತ್ತಿದ್ದರು.

ಹೀಗೆ ಹುಡುಗಿಯ ಮನೆಯವರು ಅವಳಿಗೆ ಎಣ್ಣೆ ನೀರನ್ನು ಹಾಕುವಾಗ ಸೋಬಾನೆ ಗೀತೆಯನ್ನು ಹಾಡುತ್ತಿದ್ದರು. ಅಲ್ಲದೆ ಧಾರೆ, ಮುಯ್ಯಿ, ನಾಮಕರಣ ಇನ್ನು ಹಲವು ಶಾಸ್ತ್ರಗಳಲ್ಲಿ ಸೋಬಾನೆಯನ್ನು ಹಾಡುತ್ತಿದ್ದರು.ಈ ರೀತಿ ಹಲವು ಮುತ್ತೈದೆಯರು ಸೋಬಾನೆ ಹಾಡುತ್ತ ನವವಧು-ವರರನ್ನು ಹರಸುತ್ತಿದ್ದರು.

**ಜನಪದ ಕಥೆ:**

ಕಥೆ ಹೇಳುವುದು ಮತ್ತು ಕೇಳುವುದು ಮಾನವ ಸಹಜ ಪ್ರವೃತ್ತಿಗಳಾಗಿವೆ. ಅದು ತುಂಬಾ ಪ್ರಾಚೀನ ಕಾಲದಿಂದಲೇ ಎಲ್ಲಾ ದೇಶಗಳಲ್ಲಿ ಬೆಳೆದುಬಂದಿದೆ. ಮೂಲತಃ ಮೌಖಿಕ ಸಂಪ್ರದಾಯದಿಂದಲೇ ಬೆಳೆದು ಬಂದ ಕಥನಕಲೆ ಜನಪದರನ್ನು ಮತ್ತು ಶಿಷ್ಟರನ್ನು ಒಟ್ಟಿಗೆ ತಣಿಸುವ ಮಾಧ್ಯಮವಾಗಿದೆ. ಜನಪದ ಕಥೆಗಳನ್ನು 'ಅಜ್ಜಿ ಕಥೆ'ಗಳೆಂದು ಹೇಳುವುದುಂಟು. ರಾತ್ರಿ ಮಲಗುವ ಸಮಯದಲ್ಲಿ ಚೆಂಡಿ ಹಿಡಿದ ಮಗುವನ್ನು ಮಲಗಿಸಲು ಅಜ್ಜಿ ತನ್ನ ಹಿಂದಿನ ನೆನಪುಗಳನ್ನೋ ಅಥವಾ ಅನುಭವಗಳನ್ನೋ ಕಥೆ ಮಾಡಿ ಹೇಳುವುದರಿಂದ ಜನಪದ ಕಥೆ ಹುಟ್ಟಿರಬಹುದೆಂದು ವಿದ್ವಾಂಸರು ತರ್ಕಿಸುತ್ತಾರೆ. 'ಕಥೆ ಹೇಳುವವರಿಗೆ ಒಂದು ಬಗೆಯ ಸಮಾಧಾನವನ್ನು ಅಥವಾ ಆತ್ಮತೃಪ್ತಿಯನ್ನು ಕೊಡುವುದರ ಜೊತೆಗೆ ಕೇಳುಗರಿಗೂ ಆನಂದವನ್ನು ಉಂಟು ಮಾಡಿ ತಪ್ಪು-ಒಪ್ಪುಗಳ ಉಪದೇಶಗಳನ್ನು ಮಾಡುತ್ತವೆ.

ಜನಪದ ಕಥೆಗಳು ಸಾರ್ವತ್ರಿಕವಾಗಿರುವುದರಿಂದ ಅವು ಎಲ್ಲಾ ಭಾಷೆಗಳಲ್ಲೂ ಮತ್ತು ಎಲ್ಲಾ ಪ್ರದೇಶಗಳಲ್ಲೂ ಒಂದೊಂದು ಭಾಷೆಯಲ್ಲಿಯೂ ಜನಪದ ಕಥೆಗಳಿಗೆ ಒಂದೊಂದು ತೆರನಾದ ಹೆಸರಿದೆ. ಜರ್ಮನ್ ಭಾಷೆಯಲ್ಲಿ, ಜನಪದ ಕಥೆಗೆ ಮಾಷನ್ ಎಂದು ಹೆಸರಿದೆ. ಆಂಗ್ಲಭಾಷೆಯಲ್ಲಿ ಕಿನ್ನರ ಕಥೆ (Fare tale) ಅಥವಾ ಮನೆಗಥೆ (House Hold Tale) ಎಂದು ಕರೆಯುತ್ತಾರೆ. ಸೃಷ್ಟಿಯ ದೇವಾದಿ ದೇವತೆಗಳನ್ನು, ದೇವಮಾನವರನ್ನು ಕುರಿತ ಕಥೆಗಳು ಪುರಾಣ ಕಥೆಯೆನಿಸಿಕೊಳ್ಳುತ್ತವೆ.

ಯಳಂದೂರಿನಲ್ಲಿ ೫೮ ವರ್ಷದ ಈರಮ್ಮನವರು ಹೇಳಿದ ಕಥೆ ಈ ರೀತಿಯಿದೆ. ಇದೊಂದು ಕಟ್ಟು ಕಥೆ ಎಂದೇ ಹೇಳಬಹುದು.

ಒಂದೂರಿನಲ್ಲಿ ಒಬ್ಬ ತಂದೆಗೆ ಒಬ್ಬ ಮಗಳು, ಒಬ್ಬ ಮಗ ಇದ್ದ. ಮಗಳು ಯಾವಾಗಲೂ ಉಗುರನ್ನು ಕತ್ತರಿಸಿ ಒಂದು ಕಡೆ ಹಾಕುತ್ತಿದ್ದಳು. ಆ ಉಗುರುಗಳು ಬೆಳೆದು ಒಂದು ದೊಡ್ಡ ಮರವಾಗಿ ಬೆಳೆಯಿತು. ಆ ಮರಕ್ಕೆ 'ಉಗುರು ಮರ-ಬುಗುರಿ ಮರ' ಎಂಬುದಾಗಿ ಹೆಸರಾಯಿತು. ಆ ಮರದ ಕೆಳಗೆ ನಾಗರ ಹಾವಿನ ಹುತ್ತವಿತ್ತು. ಪ್ರತಿದಿನ ಆ ಹುಡುಗಿ ಹಾಕುತ್ತಿದ್ದ ಉಗುರಿನಿಂದ ಒಂದು ಸಾರಿ ಆ ಹಾವಿನ ಕೆನ್ನೆ ಮೇಲಿದ್ದ ಬೊಬ್ಬೆ ಹೊಡೆಯುತ್ತದೆ. ಇದರ ಸಹಾಯಾರ್ಥವಾಗಿ ಹಾವು ಮನುಷ್ಯ ರೂಪವನ್ನು ಪಡೆದು ಆ ಹುಡುಗಿಯನ್ನು ಮದುವೆಯಾಗುತ್ತದೆ.

ಹುಡುಗಿಯ ತಮ್ಮನಿಗೆ ತನ್ನ ಭಾವ ಹಾವು. ಅದು ಮನುಷ್ಯ ರೂಪದಲ್ಲಿದೆ ಎಂಬ ವಿಷಯ ತಿಳಿದಿರುವುದಿಲ್ಲ. ಹೀಗೆ ಕಾಲ ಕಳೆಯುತ್ತಿದ್ದಂತೆ ಒಂದು ದಿನ ತಮ್ಮನಿಗೆ ವಿಷಯ ತಿಳಿಯುತ್ತದೆ. ಆಗ ಆತ ತನ್ನ ಅಕ್ಕನನ್ನು ಹಾವು ಮದುವೆಯಾಗಿದೆ ಎಂದು ತಿಳಿದು ತನ್ನ ಭಾವನನ್ನು ಕೊಲೆ ಮಾಡಬೇಕು ಎಂಬುದಾಗಿ ತೀರ್ಮಾನಿಸಿದನು.

ಆತ ಅಕ್ಕ-ಭಾವನನ್ನು ಹುಡುಕುತ್ತ ಅರಣ್ಯ ಪ್ರದೇಶಕ್ಕೆ ಹೊರಟ. ಕಾಡಿನಲ್ಲಿ ಅಲೆದಾಡಿದ ಅಕ್ಕ-ಭಾವನಿಗೋಸ್ಕರ ಹೀಗೆ ಹುಡುಕುತ್ತಿರುವಾಗ ಆ ಕಾಡಿನಲ್ಲಿ ಒಬ್ಬ ಅಜ್ಜಿ ಹೂ ಮಾರುವ ಕೆಲಸವನ್ನು ಮಾಡುತ್ತಿರುತ್ತಾಳೆ. ಆ ಅಜ್ಜಿಯ ಕೈಗೆ ಆತ ಸಿಕ್ಕುತ್ತಾನೆ. ಅಜ್ಜ ಆತನನ್ನು ಯಾರಪ್ಪ ನೀನು? ಯಾವ ಊರು? ಇಲ್ಲಿಗ್ಯಾಕೆ ಬಂದೆ? ಇದು ಅಪಾಯಕಾರಿಯಾಗ ಸ್ಥಳ ಇಲ್ಲಿ ಮನುಷ್ಯರು ಒಬ್ಬೊಂಟಿಯಾಗಿ ತಿರುಗಾಡುವುದಿಲ್ಲ ಎಂದು ಹೇಳುತ್ತಾಲೆ. ಆಗ ಆತ ತಾನು ಬಂದಿರುವುದು ತನ್ನ ಅಕ್ಕನಿಗಾಗಿ ಅಕ್ಕನನ್ನು ಮದುವೆ ಮಾಡಿ ಕೊಟ್ಟಿದ್ದೇವೆ. ಆದರೆ ಅಕ್ಕ ಎಲ್ಲಿದ್ದಾಳೆ ಗೊತ್ತಿಲ್ಲ. ಅವಳಿಗಾಗಿ ನಾನು ಕಾಡಿಗೆ ಬಂದೆ ಎಂದು ಹೇಳುತ್ತಾನೆ.

ಆ ಅಜ್ಜಿ ಆತನಿಗೆ ಆಶ್ರಯ ನೀಡುತ್ತಾಳೆ. ಅಜ್ಜಿ ಪ್ರತಿದಿನ ಹೂವನ್ನು ಕಟ್ಟಿ ಆತನ ಅಕ್ಕಳಿಗೆ ಕೊಡುತ್ತಿರುತ್ತಾಳೆ. ಆದರೆ ಆಕೆ ಆ ಹುಡುಗನ ಅಕ್ಕ ಎಂಬ ವಿಷಯ ಆ ಅಜ್ಜಿಗೆ ತಿಳಿದಿರುವುದಿಲ್ಲ.

ಒಂದು ದಿನ ಹೂವನ್ನು ಆ ಹುಡುಗ ಕಟ್ಟಿಕೊಡುತ್ತಾನೆ. ಆಗ ಆ ಹೂವನ್ನು ನೋಡಿದ ಆಕೆ ಅಜ್ಜಿ ಯಾರು ಈ ದಿನ ಹೂವನ್ನು ಕಟ್ಟಿದವರು ತುಂಬಾ ಚೆನ್ನಾಗಿದೆ ಎಂಬುದಾಗಿ ಕೇಳುತ್ತಾಳೆ. ಅದಕ್ಕೆ ಅಜ್ಜಿ, ತಾಯಿ ನಮ್ಮ ಮನೆಯಲ್ಲಿ ಒಂದು ಹುಡುಗ ಇದ್ದಾನೆ. ಆತ ತನ್ನ ಅಕ್ಕನನ್ನು ಹುಡುಕಿಕೊಂಡು ಬಂದಿದ್ದಾನೆ ಎಂದು ಹೇಳಿದಳು. ಆಗ ಆಕೆ ನಾನು ಆ ಹುಡುಗನನ್ನು ನೋಡಬೇಕು ಕರೆದುಕೊಂಡು ಬಾ ಎಂದು ಹೇಳಿದಳು. ಮಾರನೆ ದಿನ ಅಜ್ಜಿ ಹುಡುಗನನ್ನು ಕರೆದುಕೊಂಡು ಹೋದಳು. ಆಗ ತಿಳಿಯುತ್ತದೆ ಅವನು ಅವಳ ತಮ್ಮನೆಂದು.

ಅಕ್ಕ ತಮ್ಮನಿಗೆ ಹೇಳುತ್ತಾಳೆ, ನೀನು ಯಾಕೆ ಬಂದೆ? ನಿಮ್ಮ ಭಾವನಿಗೆ ಗೊತ್ತಾದರೆ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ಇಲ್ಲಿಂದ ಹೊರಟು ಹೋಗು ಎಂದು ಹೇಳುತ್ತಾಳೆ. ಆದರೆ ತಮ್ಮ ಕೇಳುವುದಿಲ್ಲ. ತಾನು ಇಲ್ಲೇ ಇರುತ್ತೇನೆ. ನಿನಗೆ ಮೋಸಮಾಡಿ ಮದುವೆಯಾದ ಆ ಹಾವನ್ನು ಸಾಯಿಸುತ್ತೇನೆ ಎಂದು ಹೇಳಿ ಅಲ್ಲಿಯೇ ಉಳಿಯುತ್ತಾನೆ. ಆಗ ಅಕ್ಕಳಿಗೆ ಭಯ ಉಂಟಾಗುತ್ತದೆ. ಇತ್ತ ಗಂಡ ಮನೆಗೆ ಬರುವ ಸಮಯವಾಗುತ್ತದೆ. ತಮ್ಮ ನೋಡಿದರೆ ಗಂಡನನ್ನು ಕೊಲೆ ಮಾಡಬೇಕೆಂದೆ ಬಂದಿದ್ದಾನೆ. ಇಂತಹ ಸಂದರ್ಭದಲ್ಲಿ ಆಕೆ ತಮ್ಮನನ್ನು ಅಟ್ಟದ ಮೇಲೆ ಬಚ್ಚಿಡುತ್ತಾಳೆ. ಗಂಡ ಮನೆಗೆ ಬರುತ್ತಾನೆ. ಆತನು ಹಾಲನ್ನು ಕುಡಿಯುವಾಗ ಹಾವಿನ ರೂಪವನ್ನು ತಾಳುತ್ತಾನೆ. ಆಗ ಅಟ್ಟದಲ್ಲಿದ್ದ ಆಕೆಯ ತಮ್ಮ ಹಾವಿನ ತಲೆಗೆ ಕತ್ತಿಯಿಂದ ಹೊಡೆಯುತ್ತಾನೆ. ಹಾವು ಸಾಯುತ್ತದೆ. ಅದನ್ನು ನೋಡಿ ಹೆದರಿದ ಅಕ್ಕ ತಮ್ಮನಿಗೆ ಅಪಾಯ ಖಂಡಿತ ಎಂದು ತಿಳಿದು ತಮ್ಮನನ್ನು ಕರೆದುಕೊಂಡು ತನ್ನ ತವರು ಮನೆಗೆ ಬರುವ ದಾರಿಯಲ್ಲಿ ಆಕೆಗೆ ಹೆರಿಗೆ ಬೇನೆ ಕಾಣಿಸಿಕೊಳ್ಳುತ್ತದೆ. ಒಂದು ಮಡಿಕೆಯಲ್ಲಿ ಬರಿಯ ಮೊಟ್ಟೆಯನ್ನು ಇಡುತ್ತಾಳೆ. ತಮ್ಮನಿಗೆ ಹೇಳುತ್ತಾಳೆ ಯಾವುದೇ ಕಾರಣಕ್ಕೂ ನೀನು ಮಡಿಕೆಯ ಮುಚ್ಚಳವನ್ನು ತೆಗೆಯಬೇಡ ಎಂದು ಹೇಳಿರುತ್ತಾಳೆ. ಆದರೂ ತಮ್ಮ ಅಕ್ಕ ಸ್ನಾನ ಮಾಡಲು ಹೋದ ತಕ್ಷಣ ತಮ್ಮ ಕುತೂಹಲ ತಡೆಯಲಾರದೆ ಮುಸುಗನ್ನು ತೆಗೆಯುತ್ತಾನೆ. ನಂತರ ಅಲ್ಲಿದ್ದ ಒಂದು ಮೊಟ್ಟೆ ಹಾರಿಹೋಗಿ ಬೇಲಿಯ ಮೇಲೆ ಕೂರುತ್ತದೆ. ಆ ಮೊಟ್ಟೆ ಹೊಡೆದು ಹಾವಿನ ಮರಿಯಾಗಿ ಬೆಳೆಯುತ್ತದೆ.

ಈ ವಿಷಯ ಅಕ್ಕಳಿಗೆ ತಿಳಿಯುತ್ತದೆ. ತಮ್ಮನನ್ನು ಕರೆದುಕೊಂಡು ಬರುವಾಗ ಸುಮಾರು ತಿಂಗಳು, ವರ್ಷಗಳು ಕಳೆದವು. ಅಷ್ಟೋತ್ತಿಗಾಗಲೇ ಹಾವು ಬೆಳೆದು ದೊಡ್ಡದಾಗಿರುತ್ತದೆ. ದಾರಿಯಲ್ಲಿ ಬರುತ್ತಿರುವ ತಾಯಿ ಮತ್ತು ಮಾವರನ್ನು ನಿಲ್ಲಿ ಎಂದು ಹೇಳಿ ಮಾವನನ್ನು ಕೊಲ್ಲಲು ಮುಂದಾಗುತ್ತದೆ. ಆಗ ತಾಯಿ ಅರಳಿಮರವಾಗಿ ಮಗನಿಗೆ ಅಡ್ಡನಿಲ್ಲುತ್ತಾಳೆ. ತಮ್ಮನನ್ನು ಬದುಕಿಸುವ ಸಲುವಾಗಿ ಆತನನ್ನು ಕರುವಾಗಿಸಿ ಮಗನಿಗೆ ಅಡ್ಡನಿಲ್ಲುತ್ತಾಳೆ. ಇದೇ ಚಂದ್ರನನ್ನು ನೋಡಿದಾಗ ಅಲ್ಲಿ ಅರಳಿಮರ ಮತ್ತು ಕರುವಿನ ರೀತಿ ಕಾಣಿಸುತ್ತದೆ.

ಈ ರೀತಿಯ ಕಥೆಗಳನ್ನು ವಯಸ್ಸಾದ ಹೆಂಗಸರು, ಗಂಡಸರು ಮತ್ತು ಮಕ್ಕಳು ಬಣ್ಣ ಕಟ್ಟಿ ಹೇಳುತ್ತಾರೆ.

ಒಂದು ಊರಿನಲ್ಲಿ ಒಬ್ಬ ಅಗಸ ಬಟ್ಟೆ ಒಗೆಯುತ್ತಿರುತ್ತಾನೆ. ಅವನು ಒಗೆಯುತ್ತಿದ್ದ ಬಟ್ಟೆ ಆಕಾಶಕ್ಕೆ ತಾಕುತ್ತಿರುತ್ತದೆ. ಆಗ ಅಗಸ ಈ ಹಾಳಾದ ಆಕಾಶ ಯಾಕೆ ತಾಕುತ್ತಿದೆಯೋ ಇದು ತುಂಬಾ ಮೇಲಿದ್ದರೆ ದೊಡ್ಡ ದೊಡ್ಡ ಬಟ್ಟೆಗಳನ್ನು

ಒಗೆಯಬಹುದಾಗಿತ್ತೆಂದು ಬೈದುಕೊಳ್ಳುತ್ತಾನೆ. ಇದರಿಂದ ಆಕಾಶಕ್ಕೆ ಕೋಪ ಬಂದು ತುಂಬಾ ಮೇಲಕ್ಕೆ ಹೋಯಿತ್ತೆಂದು ಹೇಳುತ್ತಾರೆ.

ಈ ಕಥೆಯನ್ನು ಇಲ್ಲಿಯ ಜನರು ಮಕ್ಕಳಿಗೆ ಆಕಾಶ ಯಾಕೆ ಇಷ್ಟು ಮೇಲಿದೆ ಎಂಬುದಕ್ಕೆ ಈ ಕಥೆಯನ್ನು ಹೇಳುತ್ತಾರೆ.

**ಗಾದೆಗಳು ಮತ್ತು ಒಗಟುಗಳು**

ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆ ಮತ್ತು ಒಗಟುಗಳು ವಿಶೇಷ ಸ್ಥಾನ ಗಳಿಸಿವೆ. ಇವೆರಡರಲ್ಲಿ ಗಾದೆಗೆ ಹೆಚ್ಚು ಪ್ರಾಮುಖ್ಯತೆ ದೊರಕಿದೆ. 'ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ'ವೆಂಬ ಮಾತು ಅದರ ಮಹತ್ವವನ್ನು ತಿಳಿಸುತ್ತದೆ. ಗಾದೆಗಳು ಪ್ರತ್ಯಕ್ಷ ಜೀವನದ ಅನುಭವದಿಂದ ರೂಪುಗೊಳ್ಳುತ್ತದೆ. ಆದ್ದರಿಂದ ಗಾದೆ ಮಾತಿನ ಬಗೆಗೆ ಎಲ್ಲರಿಗೂ ಆಸಕ್ತಿ ಇರುತ್ತದೆ. ದೈನಂದಿನ ಸಂದರ್ಭಗಳಲ್ಲಿ ಇಕ್ಕಟ್ಟುಗಳು ತಲೆದೋರಿದಾಗ ಹಿರಿಯರು ಗಾದೆ ಮಾತುಗಳನ್ನು ಉದಾಹರಿಸಿ ಪರಿಸ್ಥಿತಿಯನ್ನು ತಿಳಿಗೊಳಿಸುವುದುಂಟು. ಒಮ್ಮೊಮ್ಮೆ ಬರೀ ಮಾತುಗಳು ಶುಷ್ಕವೆನ್ನಿಸಬಹುದು. ಆದರೆ ಗಾದೆ ಮಾತುಗಳು ಜೀವನಾನುಭವದಿಂದ ಹುಟ್ಟಿದವು ಎಂಬ ಕಾರಣಕ್ಕೆ ಮಾತ್ರವಲ್ಲ. ಅದು ಆಕಾರದ ದೃಷ್ಟಿಯಿಂದಲೂ ಕೇಳುಗರ ಮನ ಸೂರೆಗೊಳ್ಳುತ್ತದೆ. ಈ ಕಾರಣಕ್ಕೆ ವೇದಗಳಿಗಿಂತಲೂ ಗಾದೆಗಳು ಮಿಗಿಲಾಗಿವೆ ಎಂಬ ಪ್ರಶಂಸೆ ಜನಪದದಲ್ಲಿದೆ. ವೇದಗಳು ಅಕ್ಷರ ಬಲ್ಲವರಿಗೆ ಮಾತ್ರ ಸೀಮಿತವಾಗಿದ್ದರೆ, ಗಾದೆಗಳು ಎಲ್ಲರ ಸ್ವತ್ತಾಗಿದೆ. ವೇದಗಳಲ್ಲಿರುವ ಜ್ಞಾನವೂ ನಿರ್ದಿಷ್ಟವಾದುದು. ಆದರೆ ಗಾದೆಗಳು ಕಾಲದಿಂದ ಕಾಲಕ್ಕೆ ಬೆಳೆಯುತ್ತಾ ಹೋಗುವ ಜ್ಞಾನ ಶಾಖೆಗಳಾಗಿವೆ. ಗಾದೆಗಳು ಅಡಗಿಸಿಟ್ಟುಕೊಂಡ ಅನುಭವದಿಂದ ಮಾತ್ರವಲ್ಲ, ರಚನೆಯ ದೃಷ್ಟಿಯಿಂದಲೂ ಗಮನಸೆಳೆಯುತ್ತವೆ. ಮಾತು, ಪ್ರಾಸ, ಧ್ವನಿ ಎಲ್ಲವೂ ಮುಪ್ಪುರಿಗೊಂಡು ಕೇಳುಗರ ಮನ ಸೂರೆಗೊಳ್ಳುವುದು ಅವುಗಳ ವಿಶೇಷ ಯಳಂದೂರಿನ ಜನರು ಬಳಸುವ ಕೆಲವು ಗಾದೆಗಳನ್ನು ಈ ಕೆಳಗೆ ಉದಾಹರಿಸಲಾಗಿದೆ.

೧. ಮಾತು ಬಲ್ಲವನಿಗೆ ಜಗಳವಿಲ್ಲ
ಊಟ ಬಲ್ಲವನಿಗೆ ರೋಗವಿಲ್ಲ

೨. ಉತ್ತರನ ಪೌರುಷ ಒಲೆ ಮುಂದೆ

೩. ಅತ್ತೆ ಮೇಲಿನ ಕೋಪ ಕೊತ್ತೀ ಮೇಲೆ

೪. ಆರು ಕೊಟ್ಟರೆ ಅತ್ತೆ ಕಡೆ
ಮೂರು ಕೊಟ್ಟರೆ ಸೊಸೆ ಕಡೆ

೫. ಬೇಲಿಯೇ ಎದ್ದು ಹೊಲ ಮೆಯ್ದ ಹಾಗೆ

೬. ನಗುವವರ ಮುಂದೆ ನಗೆಗೇಡು

೭. ಕೆಟ್ಟು ನೆಂಟರ ಸೇರಬೇಡ

೮. ಆಯ ನೋಡಿ ಪಾಯ ಹಾಕು

೯. ತುಂಬಿದ ಕೊಡ ತುಳುಕೋದಿಲ್ಲ

೧೦. ಹಲ್ಲಿ ಇದ್ದವನಿಗೆ ಕಡಲೆ ಇಲ್ಲ, ಕಡಲೆ ಇದ್ದವನಿಗೆ ಹಲ್ಲು ಇಲ್ಲ

೧೧. ಕೂಸಿದ್ದ ಮನೆಗೆ ಬೀಸಣಿಗೆ ಯ್ಯಾತಕ

೧೨. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ

೧೩. ತಾಯಿಗಿಂತ ಹಿತವಂತರಿಲ್ಲ, ಸಕ್ಕರೆಗಿಂತ ಸವಿಯಿಲ್ಲ

೧೪. ಕುಡಿದವನಿಗೆ ಮನೆಯೂ ಒಂದೇ ಸ್ಮಶಾನವೂ ಒಂದೆ

೧೫. ಆಳಾಗಿ ದುಡಿ ಅರಸನಾಗಿ ಉಣ್ಣು

೧೬. ಸಂಕಟ ಬಂದಾಗ ವೆಂಕಣರಮಣ

೧೭. ಹುಣಸೆ ಮುಪ್ಪಾದರೇನು ಹುಳಿ ಮುಪ್ಪೇ

೧೮. ಹೆತ್ತ ತಾಯಿಗೆ ಹೆಗ್ಗಣ ಮುದ್ದು

೧೯. ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ

೨೦. ಬಡವನ ಸಿಟ್ಟು ದವಡೆಗೆ ಮೂಲ

೧. ಯಾವ ಸಮಯದಲ್ಲಿ ಯಾವ ಮಾತನಾಡಬೇಕೆಂಬ ಅರಿವು ಇರುತ್ತದೆಯೋ ಆತ ಎಲ್ಲೇ ಹೋದರು ಯಾರ ಹತ್ತಿರವೂ ನಿಷ್ಠೂರವಾಗದೆ ಅವರ ಜೊತೆ ಉತ್ತಮ ಗೆಳೆತನವನ್ನು ಬೆಳೆಸಿಕೊಂಡು ಬರುತ್ತಾರೆ. ಹಾಗೆಯೇ ಊಟದ ರುಚಿ ತಿಳಿದವನು ಯಾವ ಸಮಯದಲ್ಲಿ ಯಾವ ಊಟ ಮಾಡಬೇಕೆಂಬ ಅರಿವು ಇರುವುದರಿಂದ ಸಮಯಕ್ಕೆ ತಕ್ಕಂತೆ ಊಟ ಮಾಡಿ ತನ್ನ ಆರೋಗ್ಯವನ್ನು ಉತ್ತಮಪಡಿಸಿಕೊಳ್ಳುತ್ತಾನೆ.

೨. ಸರ್ವೇಸಾಮಾನ್ಯವಾಗಿ ಗಂಡಸರು ಹೆಚ್ಚು ಮಾತನಾಡುವುದಿಲ್ಲ. ಆ ವಿಷಯ ಹೆಂಗಸರಿಗೆ ಬಿಟ್ಟಿದ್ದು ಹಾಗಾಗಿ ಒಬ್ಬ ಗಂಡಸು ಕೆಲಸ ಮಾಡದೆ ಬಡಾಯಿ ಕೊಚ್ಚಿಕೊಳ್ಳುತ್ತಿದ್ದರೆ ಆಗ ಈ ಗಾದೆ ಹೇಳುತ್ತಿದ್ದರು.

೩. ಯಾರದೋ ಮೇಲಿನ ಕೋಪವನ್ನು ಯಾರದೋ ಮೇಲೆ ಬಿಟ್ಟಂತೆ, ಅತ್ತೆಯನ್ನು ಎದುರಿಸಲಾಗದ ಸೊಸೆ ತನ್ನ ಕೋಪವನ್ನು ಮಕ್ಕಳ ಮೇಲೆ ಅಥವಾ ಮೂಕ ಪ್ರಾಣಿಗಳ ಮೇಲೆ ತೀರಿಸಿಕೊಳ್ಳುತ್ತಿದ್ದಳು.

೪. ಮನುಷ್ಯನಿಗೆ ದುಡ್ಡಿನ ಅವಶ್ಯಕತೆ ತುಂಬಾ ಇದೆ. ಹಾಗಾಗಿ ಯಾರು ಹೆಚ್ಚು ಹಣ ಕೊಡುತ್ತಾರೋ ಆ ಕಡೆಗೆ ಜನ ವಾಲುತ್ತಾರೆ. ಕೆಲವು ಮನುಷ್ಯರ ಮನಸ್ಸು ಚಂಚಲವಾಗಿರುತ್ತದೆ. ಆಗ ಅವರು ಈ ರೀತಿ ವರ್ತಿಸುತ್ತಾರೆ ಎಂಬುದನ್ನು ತಿಳಿಸಿವೆ.

೫. ಮನೆಯ ವ್ಯಕ್ತಿಯೇ ಕೆಲವು ಸಾರಿ ಶತ್ರುಗಳಾಗುತ್ತಾರೆ.ಆ ಶತ್ರುವೇ ಗುಪ್ತವಾದ ವಿಚಾರವನ್ನು ಹೊರ ಜನಕ್ಕೆ ತಿಳಿಸುವುದು ಮತ್ತು ತಮ್ಮಮನೆಗೆ ಒಳ್ಳೆಯದನ್ನು ಬಯಸದೇ ಕೆಟ್ಟದನ್ನು ಮಾಡುತ್ತಾ ಹೋಗುವ ವ್ಯಕ್ತಿಗೆ ಈ ಭಾಗದ ಜನರು ಈ ರೀತಿ ಹೇಳಿ ಅವರ ಮನಸ್ಸನ್ನು ತಿಳಿಗೊಳಿಸುವ ಪ್ರಯತ್ನ ಮಾಡುವುದನ್ನು ಕಾಣುತ್ತೇವೆ.

೬. ಎಷ್ಟೇ ಕಷ್ಟ ಬಂದರೂ ನಮ್ಮನ್ನು ನೋಡಿ ನಗುವರ ಮುಂದೆ ಕಷ್ಟವನ್ನು ಹೇಳಿಕೊಳ್ಳಬಾರದು. ಹಾಗೆ ಹೇಳಿಕೊಂಡರೆ ಅವರು ನಾಲ್ಕಾರು ಜನರಿಗೆ ಹೇಳಿಕೊಂಡು ನಗುತ್ತಾರೆ ಎಂದು ಕೆಲವು ಸಾರಿ ತಾಯಿ ತನ್ನ ಮಗಳಿಗೆ ಗಂಡನ ಮನೆಗೆ ಹೋಗುವಾಗ ಹೇಳುತ್ತಿದ್ದಳು.

೭. ಜೀವನದಲ್ಲಿ ಕಷ್ಟಬಂದಾಗ ಅದನ್ನು ಮನೆಯಲ್ಲಿಯೇ ಪರಿಹರಿಸಿಕೊಳ್ಳಬೇಕು. ಅದನ್ನು ಬಿಟ್ಟು ಬಂಧುಬಳಗದ ಮನೆಗೆ ಹೋದರೆ ಅವರು ನಮ್ಮನ್ನು ನೋಡಿ ನಗುತ್ತಾರೆ ಹೊರತು ಸಹಾಯ ಮಾಡುವುದಿಲ್ಲ ಎಂದು ಹಿಂದೆ ತಾಯಿ ತನ್ನ ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಎಷ್ಟೇ ಕಷ್ಟ ಬಂದರೂ ಗಂಡನ ಮನೆಯಲ್ಲೇ ಇದ್ದು ಪರಿಹರಿಸಿಕೊಳ್ಳಬೇಕು ಒಂದು ವೇಳೆ ಕೆಟ್ಟು ತೌರು ಮನೆಗೆ ಬಂದರೆ ಆಗ ಅತ್ತಿಗೆ ನಿನ್ನನ್ನು ನೋಡಿ ನಗುತ್ತಾಳೆ ಎಂದು ಹಿತನುಡಿಗಳನ್ನು ಹೇಳಿ ಕಳಹಿಸುತ್ತಿದ್ದಳು.

೮. ಯಾವುದೇ ಕೆಲಸವನ್ನು ಆತುರ ಪಡದೆ ತಾಳ್ಮೆಯಿಂದ ಆಲೋಚಿಸಿ ಮಾಡಬೇಕು. ಒಂದು ವೇಳೆ ಆತುರ ಪಟ್ಟರೆ ಅನಾಹುತವೇ ಹೆಚ್ಚು ಎಂದು ಹೇಳುವಾಗ ಈ ಗಾದೆಯನ್ನು ಬಳಸುತ್ತಿದ್ದರು.

೯. ದೊಡ್ಡವರ ಮನಸ್ಸು ಯಾವಾಗಲೂ ದೊಡ್ಡದಾಗೆ ಇರುತ್ತದೆ. ಶ್ರೀಮಂತ, ಬಡವ ಎನ್ನುವ ಭಿನ್ನ ಭೇದವಿಲ್ಲದೆ ಎಲ್ಲರನ್ನು ಒಂದೇ ರೀತಿ ಕಾಣುತ್ತಾರೆ. ಅವರನ್ನು ಹೊಗಳುವ ಸಂದರ್ಭದಲ್ಲಿ ಈ ಗಾದೆಯನ್ನು ಬಳಸುತ್ತಿದ್ದರು.

೧೦. ಕಾಸು ಇದ್ದವನಿಗೆ ಆರೋಗ್ಯವಿಲ್ಲ, ಆರೋಗ್ಯವಿದ್ದವನಿಗೆ ಕಾಸು ಇಲ್ಲ ಎಂಬಂತೆ ಎಲ್ಲವನ್ನು ತಿಂದು ಅರಗಿಸಿಕೊಳ್ಳುತ್ತೇನೆ ಎನ್ನುವವರಿಗೆ ಬಡತನದಿಂದ ತಿನ್ನುವ ಭಾಗ್ಯವಿರುವುದಿಲ್ಲ. ಸಾಕಷ್ಟು ಹಣ ಇದ್ದವನಿಗೆ ಅನಾರೋಗ್ಯದ ಕಾರಣ ಏನನ್ನು ತಿನ್ನಲು ಸಾಧ್ಯವಾಗದಿರಬಹುದು.

೧೧. ಮಕ್ಕಳಿದ್ದರೆ ಸ್ವರ್ಗವಿದ್ದಂತೆ ಎನ್ನುವ ಹಾಗೆ ಮಗು ಮನೆಯಿಂದ ಹೊರಗೆ, ಹೊರಗಿನಿಂದ ಒಳಗೆ ಓಡಾಡುವುದರಿಂದ ಅದೇ ಬೀಸಣಿಗೆಯಾದಂತೆ ಮತ್ತು ಮನೆಯ ಮುಂದಿನ ಬಾಗಿಲನ್ನು ಯಾವಾಗಲೂ ಮಗುವಿನಿಂದ ತೆರೆದಂತೆ ಇರುವುದರಿಂದ ಮನೆಗೆ ಗಾಳಿ ಬೀಸುತ್ತಿರುತ್ತದೆ. ಆದ್ದರಿಂದ ಬೀಸಣಿಗೆಯ ಅವಶ್ಯಕವಿಲ್ಲವೆಂದು ಹೇಳುತ್ತಾರೆ.

೧೨. ಕುಂಬಾರನು ಮಡಿಕೆ ಮಾಡಲು ವರುಷಾನುಗಟ್ಟಲೆ ಕಷ್ಟ ಪಡುತ್ತಾನೆ. ಆದರೆ ಆ ಮಡಿಕೆಯನ್ನು ಒಡೆಯಲು ಒಂದೆ ಒಂದು ನಿಮಿಷ ಸಾಕು. ಹೀಗೆ ಬಡವನು ಜೀವನದುದ್ದಕ್ಕೂ ಕಷ್ಟ ಪಡುತ್ತಿದ್ದರೆ, ಶ್ರೀಮಂತನು ಜೀವನದುದ್ದಕ್ಕೂ ಸುಖ ಪಡುತ್ತಿರುತ್ತಾನೆ ಎಂಬುದನ್ನು ತಿಳಿಸುತ್ತದೆ.

೧೩. ತಾಯಿಯೇ ದೇವರು ತಾಯಿ ಹೇಳುವುದೆಲ್ಲ ವೇದವಾಕ್ಯ, ತಾಯಿ ತನ್ನ ಮಕ್ಕಳು ಕೆಡುವುದನ್ನು ಸಹಿಸುವುದಿಲ್ಲ. ಹಾಗಾಗಿ ಪ್ರತಿ ಕ್ಷಣದಲ್ಲೂ ಒಳ್ಳೆಯ ಮಾತುಗಳನ್ನು ತನ್ನ ಮಕ್ಕಳಿಗೆ ಹೇಳುತ್ತಿರುತ್ತಾಳೆ. ಇದರಿಂದ ಬಂಧು-ಬಳಗದವರಲ್ಲಿ ತಾಯಿಯೇ ಶ್ರೇಷ್ಠ ಎಂದು ಹೇಳುವಾಗ ಈ ಮಾತನ್ನು ಬಳಸಿಕೊಳ್ಳುತ್ತಿದ್ದರು.

೧೪. ಕುಡಿತದ ಅಮಲಿನಲ್ಲಿದ್ದವರಿಗೆ ಮನೆ, ಸ್ಮಶಾನ ಒಂದೇ ಆಗಿರುತ್ತದೆ. ಇವರು ಎಲ್ಲೆಂದರೆಲ್ಲಿ ಬಿದ್ದು ಸಾವನ್ನು ಹತ್ತಿರಕ್ಕೆ ಕರೆಯುತ್ತಿರುತ್ತಾರೆ. ಅಂತವರಿಗೆ ಈ ಗಾದೆಯನ್ನು ಹೇಳುತ್ತಾರೆ.

೧೫. ಕೈ ಕೆಸರಾದರೆ ಬಾಯಿ ಮೊಸರು ಎಂಬಂತೆ ಕಷ್ಟ ಪಟ್ಟು ದುಡಿದು ನಂತರ ನೆಮ್ಮದಿಯಿಂದ ಉಣ್ಣಬೇಕು. ಆಗ ಆರೋಗ್ಯ ಮತ್ತು ನೆಮ್ಮದಿ ದೊರೆಯುತ್ತದೆ. ಕುಳಿತು ತಿನ್ನುವವನಿಗೆ ಮೈಯೆಲ್ಲ ರೋಗ ಎನ್ನುವಮತೆ ಆತ ನೆಮ್ಮದಿಯಿಂದ ಇರಲು ಸಾಧ್ಯವಿಲ್ಲ ಎಂದು ಹೇಳುವಾಗ ಈ ಗಾದೆಯನ್ನು ಬಳಸುತ್ತಿದ್ದರು.

೧೬. ದೇವರಲ್ಲಿ ನಂಬಿಕೆಯಿಲ್ಲದವರು ತುಂಬಾ ಕಷ್ಟ ಬಂದಾಗ ದೇವರನ್ನು ಸ್ಮರಿಸಿಕೊಳ್ಳುತ್ತಾರೆ.

೧೭. ಹುಣಸೆ ಮರಕ್ಕೆ ವಯಸ್ಸಾದರೇನು ಅದರಲ್ಲಿ ಬಿಡುವ ಹುಣಸೆಯ ಹುಳಿಗೆ ಮುಪ್ಪಾಗುತ್ತದೆಯೇ? ಇದರಂತೆ ಒಬ್ಬ ವ್ಯಕ್ತಿಗೆ ಎಷ್ಟೇ ವಯಸ್ಸಾದರೂ ಅವರ ಬೆಲೆ ಕಡಿಮೆಯಾಗುವುದಿಲ್ಲ ಎಂಬುದನ್ನು ತಿಳಿಸಿದೆ.

೧೮. ಹೆತ್ತ ತಾಯಿಗೆ ತನ್ನ ಮಗು ಹೇಗಿದ್ದರೂ ಚೆನ್ನಾಗಿಯೇ ಇರುತ್ತದೆ. ಏಕೆಂದರೆ ತನ್ನ ಕರುಳುಬಳ್ಳಿಯನ್ನು ಹಂಚಿಕೊಂಡಿರುತ್ತಾಳೆ. ಹಾಗಾಗಿ ಮಗು ಹೇಗೆ ಇದ್ದರೂ ತಾಯಿಗೆ ಚೆನ್ನಾಗಿ ಇರುತ್ತದೆ.

೧೯. ದೂರದ ಬೆಟ್ಟ ಕಣ್ಣಿಗೆ ನುಣುಪಾಗಿ ಕಾಣುತ್ತದೆ. ಅದರ ಹತ್ತಿರಕ್ಕೆ ಹೋದಾಗ ಅಲ್ಲಿದ್ದ ಕಲ್ಲು, ಮರ, ಗಿಡಗಳ ಪರಿಚಯವಾಗುತ್ತದೆ. ಅದರಂತೆ ಪ್ರತಿಯೊಬ್ಬರ ಜೀವನದಲ್ಲೂ ಕಷ್ಟ-ಸುಖ ಅನ್ನುವುದೂ ಇರುತ್ತದೆ. ಆದರೆ ನಾವು ಕೆಲವರನ್ನು ನೋಡಿದಾಗ ಅವರಿಗೆ ಕಷ್ಟವೇ ಇಲ್ಲವೆಂದು ಭಾವಿಸುತ್ತೇವೆ. ಆದರೆ ಅವರ ಜೀವನದ ಪರಿಚಯವಾದಾಗ ಈ ಜೀವನಚಕ್ರದಲ್ಲಿ ಎಲ್ಲರೂ ಕಷ್ಟ ಸುಖಗಳ ಸಮಪಾಲಿಗರು ಎನ್ನುವುದು ತಿಳಿಯುತ್ತದೆ.

೨೦. ಬಡವನ ಸಿಟ್ಟಿಗೆ ಬೆಲೆ ಸಿಗುವುದಿಲ್ಲ. ಇದಕ್ಕೆ ಶ್ರೀಮಂತರ ದಬ್ಬಾಳಿಕೆಯೆ ಕಾರಣವಾಗಿದೆ. ಶ್ರೀಮಂತರು ಬಡವರ ಕೂಗನ್ನು ಕೇಳದೆ ತಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳುತ್ತಿದ್ದಾರೆ. ಹಾಗಾಗಿ ಆತನ ಮಾತಿಗೆ ಬೆಲೆ ಸಿಗುತ್ತಿಲ್ಲ ಎಂಬುದನ್ನು ಗಾದೆ ತಿಳಿಸುತ್ತದೆ.

ಗಾದೆಗಳು ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಇವೆ ಪಟ್ಟಣ ಪ್ರದೇಶದಲ್ಲಿ ಇಲ್ಲವೆಂದಲ್ಲ. ಹಳ್ಳಿ-ದಿಳ್ಳಿ ಸೇರಿದಂತೆ, ಅಕ್ಷರಸ್ಥರು ಮತ್ತು ಅನಕ್ಷಸ್ಥರ ನಡುವೆ ಹಿರಿಯರು-ಕಿರಿಯರ ನಡುವೆ ಯಾವ ಭಿನ್ನಭೇದವಿಲ್ಲದಂತೆ ಗಾದೆಗಳು ಹಾಸುಹೊಕ್ಕಾಗಿರುತ್ತದೆ.

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಒಗಟುಗಳಿಗೂ ಮುಖ್ಯ ಸ್ಥಾನವಿದೆ. ಜನಸಾಮಾನ್ಯರು ವಿದ್ಯೆ ಕಲಿಯದಿದ್ದರೂ, ಜೀವನಾನುಭವದಿಂದ ಪಡೆದುಕೊಂಡ ಜ್ಞಾನ ಕಡಿಮೆಯಾದುದೇನಲ್ಲ. ಇದು ಹೇಳುವವ ಮತ್ತು ಕೇಳುವವನ ಮಧ್ಯೆ ಪ್ರಶ್ನೆ – ಉತ್ತರ ರೂಪವಾಗಿ, ಇಲ್ಲವೇ ಪ್ರಶ್ನೆಗೆ ಪ್ರತಿಪ್ರಶ್ನೆಯಾಗಿ ಇದು ಮುಂದುವರೆಯುತ್ತದೆ. ಹಿಂದೆ ಯಳಂದೂರಿನಲ್ಲಿ ಹೆಚ್ಚು ಜನರು ಸೇರಿದಾಗ ಒಗಟನ್ನು ಬಿಡಿಸುವುದು ಒಂದು ಮೋಜಾಗಿತ್ತು. ಆದ್ರೆ ಇತ್ತೀಚೆಗೆ ಇದು ಕಡಿಮೆಯಾಗಿದೆ. ಒಂದೊಂದು ಸಾರಿ ಮಾತಾಡುವಾಗ ಜನರು ಬಳಸುವ ಒಗಟು ಈ ರೀತಿ ಇದೆ.

'ಹಸಿರು ಗಿಡಿದಾಗ ಮೊಸರು ಚೆಲ್ಲಾದ' ಎನ್ನುವುದು ಇಲ್ಲಿ ಮಲ್ಲಿಗೆ ಹೂವನ್ನು ಕುರಿತುದಾಗಿದೆ.

ಹುಲ್ಲಲ್ಲಿ ಹುಲಿ ಮಲಗಿದೆ

(ಅಡೆಹಾಕಿರುವ ಮಾವಿನ ಕಾಯಿ)

ಅಪ್ಪ ಆಕಾಶಕ್ಕೆ

ಅಜ್ಜಿ ಪಾತಾಳಕ್ಕೆ

ಮಗಳು ಮದುವೆಗೆ

ಮಗ ವ್ಯಾಪಾರಕ್ಕೆ

(ತೆಂಗಿನ ಮರದ ತುದಿ, ಬೇರು, ಹೊಂಬಾಳೆ, ಗರಿ, ತೆಂಗಿನಕಾಯಿ)

ಮುತ್ತಿನಂಥ ಮಗ ಮುಳ್ಳಿನಲ್ಲಿ ಬಿದ್ದಿದ್ದಾನೆ (ಕುಸಬೆ ಬೀಜ)

ಮಾಳಿಗೆ ಮೇಲೆ

ಮಂಡಲದ ಹಾವು ಮಲಗಿದೆ (ಪಡವಲ ಕಾಯಿ)

ಹೀಗೆ ಹಲವು ಒಗಟುಗಳನ್ನು ಬಿಡಿಸುತ್ತಿದ್ದರು.

ಮೊದಲನೆಯ ಒಗಟಿನಲ್ಲಿ ಹಸಿರು ಗಿಡ ಪರಿಚಿತವಾಗಿ ಕಂಡರೂ ಇಲ್ಲಿ 'ಮೊಸರುಚೆಲ್ಲಿದೆ' ಎಂಬುದು ಅಸ್ಪಷ್ಟವಾಗಿ ಮನುಷ್ಯನ ಬುದ್ಧಿಯನ್ನು ಕೆರಳಿಸುವಂತೆ ಮಾಡುತ್ತದೆ. ಮಲ್ಲಿಗೆ ಹೂವಿನ ಬಿಳಿ ಬಣ್ಣದ ಸಾದೃಶ್ಯ ಮತ್ತು ಚೆಲ್ಲುವಿಕೆ ಗಿಡದಲ್ಲಿ ಅಲ್ಲಲ್ಲಿ ಹೂ ಬಿಟ್ಟಿರುವ ಚಿತ್ರವನ್ನು ಕಣ್ಮುಂದೆ ಕಟ್ಟುವಂತೆ ಮಾಡುತ್ತದೆ.

ಹೀಗೆ ಮುಂದಿನ ಒಗಟುಗಳಲ್ಲಿ ಹೆಚ್ಚು ಪ್ರಯಾಸವಿಲ್ಲದೆ ಪರಿಚಿತವಿರುವ ವಸ್ತುವನ್ನೇ ಬಳಸಿಕೊಂಡು ಒಗಟನ್ನು ರಚನೆ ಮಾಡಿಕೊಂಡಿರುವುದನ್ನು ಕಾಣಬಹುದು. ಇವುಗಳು ಜನಪದರ ಜಾಣ್ಮೆಯನ್ನು ತೋರುವ ಸಾಧನವಾಗಿದೆ.

ಅಕ್ಕ ತೌರಿಗೆ ಹೋಗುವಾಗ

ಸರ್ರರೆ ಹೋಗುತ್ತಾಳೆ

ಗಂಡನ ಮನೆಗೆ ಬರುವಾಗ

ಹೆಜ್ಜೆ ಹೆಜ್ಜೆಗೂ ಕಣ್ಣರು ಸುರಿಸುತ್ತಾ

ನಿಧಾನವಾಗಿ ಬರುತ್ತಾಳೆ

ಇದು ಒಂದು ಹೆಣ್ಣಿಗೆ ತನಗೂ ಮತ್ತು ತನ್ನ ತವರಿಗೂ ಇರುವ ಅವಿನಾಭಾವ ಸಂಬಂಧವನ್ನು ತಿಳಿಸುತ್ತಿದೆ.

ಒಂದು ಹೆಣ್ಣು ಮದುವೆಯಾದ ನಂತರ ಹುಟ್ಟಿದ ಮನೆಗೆ ಮತ್ತು ಗಂಡನ ಮನೆಗೆ ಯಾವುದೇ ರೀತಿ ಕಳಂಕ ಬರದೆ ಇರುವ ಹಾಗೆ ನಡೆದುಕೊಳ್ಳಬೇಕಾಗುತ್ತದೆ. ತೌರನ್ನು ಅಗಲಿ ಗಂಡನ ಮನೆಯಲ್ಲಿರಬೇಕಾದ ಹೆಣ್ಣಿಗೆ ತೌರು ಎಂದು ಮರೆಯದ

ನೆನಪಾಗಿ ಉಳಿಯುತ್ತದೆ. ಹೀಗೆ ಬಹಳ ಕಾಲ ಅಗಲಿಕೆಯಿಂದ ಪರಿತಪಿಸಿದ ಹೆಣ್ಣಿಗೆ ತೌರಿಗೆ ಹೋಗುವ ಅವಕಾಶ ಬಂದಾಗ ಅವಳಿಗಾಗುವ ಸಂತೋಷ ಕಾತರಗಳು ಅಷ್ಟಿಷ್ಟಲ್ಲ. ಆದರೆ ತೌರಿನಲ್ಲೇ ಉಳಿಯಲು ಸಾಧ್ಯವಿಲ್ಲ. ಮತ್ತೆ ಗಂಡನ ಮನೆಗೆ ಬರುವಾಗ ಮೈಯೆಲ್ಲ ಭಾರವಾಗಿ ಮೊದಲಿನ ಕಾತರ ಕಂಡುಬರುವುದಿಲ್ಲ. ಈ ಒಗಟಿನ ನಿಜವಾದ ಅರ್ಥವೇನೆಂದರೆ ಖಾಲಿಬಿಂದಿಗೆಯನ್ನು ಬಾವಿಗೆ ಬಿಡುವಾಗ ಅನಿವಾರ್ಯವಾಗಿಯೇ ವೇಗವಾಗಿ ಹೋಗುತ್ತದೆ. ಆದರೆ ನೀರು ತುಂಬಿಕೊಂಡ ಬಿಂದಿಗೆ ಸೇದಿದ ಹಾಗೆಲ್ಲಾ ನೀರನ್ನು ಚೆಲ್ಲುತ್ತಾ ನಿಧಾನವಾಗಿ ಬರುತ್ತದೆ. ಮೇಲೇರುತ್ತಾ ಬಂದ ಬೀದಿಗೆ ತೌರಿನ ಭಾವನೆಗಳನ್ನು ಹೊತ್ತ ಭಾರ ಹೃದಯದ ಹೆಣ್ಣಿನ ಚಿತ್ರವೂ ಹೋಲಿಕೆಯಾಗಿದೆ. ತೌರಿಗೆ ಹೋಗುವಾಗಿನ ಶೂನ್ಯ ಹೃದಯದ ಹೆಣ್ಣು, ಬರುವಾಗ ಚೈತನ್ಯವನ್ನು ತುಂಬಿಕೊಂಡು ಬಂದಳು ಎಂಬುದನ್ನು ತಿಳಿಸುತ್ತದೆ.

ಮೊಗ್ಗಾಗಿ ಅರಳುವುದು, ಪುಷ್ಪ ತಾನಲ್ಲ
ಸೂರ್ಯಕಿರಣಕೂ ಅದು ಬಾಡುವುದಿಲ್ಲ

ಇದರ ಅರ್ಥ ಕೊಡೆ. ಮಡಿಸಿದಾಗ ಕೊಡೆ ಮೊಗ್ಗಿನಂತಿರುತ್ತದೆ. ಹೂವಿಗೂ ಕೊಡೆಗೂ ಇರುವ ಸಮಾನ ಗುಣವನ್ನು ತಿಳಿಸುತ್ತದೆ. ಆದರೆ ಕೊಡೆಯನ್ನು ಹೂವು ಎಂದು ಭಾವಿಸಲಾಗುವುದಿಲ್ಲ. ಸೂರ್ಯ ಕಿರಣಕ್ಕೆ ಅದು ಬಾಡುವುದಿಲ್ಲ. ಈಗ ಅರ್ಥ 'ಹೂವು ಎಂದಾಗದೆ 'ಕೊಡೆ' ಆಗಿಯೇ ಉಳಿದುಕೊಳ್ಳುತ್ತದೆ.

ಬದಿನಲ್ಲಿ ಹುಟ್ಟುವುದೂ ಬದಿನಲ್ಲಿ ಬೆಳೆವುದು
ಹೋಗುವವರ ಸೆರಗ್ಹಿಡಿದು ಎಳೆವುದು ಉತ್ತರಾಣಿ

ಓಡಾಡುವ ದಾರಿಯಲ್ಲಿ ಬೆಳೆದ ಉತ್ತರಾಣಿ ಕಡ್ಡಿಯು ಓಡಾಡುವ ಜನರಿಗೆ ಅಂಟಿಕೊಳ್ಳುತ್ತಿರುತ್ತದೆ. ಅದಕ್ಕೆ ಜನಪದರು ಈ ರೀತಿ ಒಗಟನ್ನು ಕಟ್ಟಿ ರಂಜಿಸುವುದನ್ನು ಕಾಣಬಹುದು.

ಒಟ್ಟಿನಲ್ಲಿ, ಒಗಟಿನ ಆಸಕ್ತಿ ಅತ್ಯಂತ ಮೂಲಭೂತವಾದುದು. ಪುರಾತನ ಕಾಲದಿಂದಲೂ ರೂಢಿಯಲ್ಲಿರುವ ಬುದ್ಧಿ ಪ್ರಧಾನವಾದ ಒಂದು ಚಟುವಟಿಕೆ. ಯುವ ಪೀಳಿಗೆ ಮನೋರಂಜನೆಗಾಗಿ ನೆಚ್ಚಿಕೊಂಡರೆ ವಯಸ್ಕರು ಅವುಗಳ ಬೋಧನ ಗುಣಕ್ಕೆ ಮನಸೋತಿರುತ್ತಾರೆ. ಈ ಗುಣಗಳಿಂದಾಗಿಯೇ ಅವು ಸಾಮಾಜಿಕ ಮಹತ್ವವನ್ನು ಪಡೆದುಕೊಂಡಿವೆ.

# ಅಧ್ಯಾಯ ೫

## ಆಚಾರ ಮತ್ತು ಸಂಪ್ರದಾಯಗಳು

ಯಳಂದೂರಿನ ಜನರು ಹಿಂದು ಧರ್ಮಕ್ಕೆ ಅನುಗುಣವಾಗ ಆಚಾರ-ವಿಚಾರ, ಸಂಪ್ರದಾಯ, ನಂಬಿಕೆ, ಹಬ್ಬ-ಹರಿದಿನ, ಮದುವೆ-ಮುಂಜಿ, ಶವಸಂಸ್ಕಾರ, ಸಭೆ-ಸಮಾರಂಭಗಳನ್ನು ಹಿಂದಿನಿಂದಲೂ ನಡೆಸುತ್ತಾ ಬಂದಿದ್ದಾರೆ. ಭಾರತ ಸಾಮಾಜಿಕವಾಗಿ ಪುರುಷ ಪ್ರಧಾನ ದೇಶವಾದರೂ ಸ್ತ್ರೀಯರು ಹಿಂದೆ ಜನಪದ ಕಥೆ, ಹಾಡು, ಸೋಬಾನೆ ಪದಗಳನ್ನು ಶುಶ್ರಾವ್ಯವಾಗಿ ಹಾಡುತ್ತಿದ್ದರು. ಇತ್ತೀಚೆಗೆ ಸರಕಾರವೇ ರಚಿಸಿರುವ ಸ್ತ್ರೀ ಶಕ್ತಿ, ಸ್ವಸಹಾಯ ಸಂಘಗಳ ಹುಟ್ಟು-ಬೆಳವಣಿಗೆಯಿಂದ ಸ್ತ್ರೀಯರು ಸ್ವಾವಲಂಬಿಗಳಾಗಿ ಯಾವುದೇ ಸಭೆ-ಸಮಾರಂಭಗಳಲ್ಲಿ ಭಾಗಿಯಾಗಿ ಚರ್ಚಿಸುವ ಶಕ್ತಿ ಸಾಮರ್ಥ್ಯವನ್ನು ಪಡೆದುಕೊಂಡಿದ್ದಾರೆ.

ಒಂದು ಪ್ರದೇಶದ ಜನರ ಜೀವನ ಮತ್ತು ಸಂಸ್ಕೃತಿಯನ್ನು ಸಮರ್ಪಕವಾಗಿ ಅರಿತುಕೊಳ್ಳಲು ಆ ಪ್ರದೇಶದ ಭೌಗೋಳಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ವಿಚಾರಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಇಂತಹ ಕಾರಣದಿಂದ ಜಾನಪದವನ್ನು ಭೌಗೋಳಿಕ ವ್ಯಾಪ್ತಿಯೊಳಗೆ ಅಧ್ಯಯನ ಮಾಡಬೇಕಾಗುತ್ತದೆ.

**ಸಾಮಾಜಿಕ ಹಿನ್ನೆಲೆ**

ಯಳಂದೂರು ಸಾಮಾಜಿಕವಾಗಿ ವೈವಿಧ್ಯವನ್ನು ಪಡೆದುಕೊಂಡಿರುವ ಊರು. ವಿಭಿನ್ನ ಜಾತಿ, ಜನಾಂಗಗಳನ್ನು ಒಳಗೊಂಡಿರುವ ಇಲ್ಲಿ ವಿಭಿನ್ನ ಧರ್ಮೀಯರು ಭಿನ್ನಭಿನ್ನವಾದ ಆಚಾರ-ವಿಚಾರ ಉಡುಗೆ-ತೊಡುಗೆಗಳನ್ನು ಹೊಂದಿದ ಬೇರೆ ಬೇರೆ ಭಾಷಿಕರು ಇವೆಲ್ಲವನ್ನೊಳಗೊಂಡ ಐಕ್ಯತೆಯ ಗೂಡಾಗಿದೆ. ಈ ಊರಿನಲ್ಲಿ ಅಧಿಕವಾಗಿ ನಾಯಕ ಜನಾಂಗ ಕಂಡುಬರುತ್ತದೆ. ಅನಂತರ ದಲಿತ ಸಮುದಾಯದ ಜನಾಂಗವು ಸಂಖ್ಯೆಯಲ್ಲಿ ಎರಡನೇ ಸ್ಥಾನ ಪಡೆದಿದೆ. ಅನಂತರ ವೀರಶೈವ, ಬ್ರಾಹ್ಮಣ, ಕುಂಬಾರ, ಗಾಣಿಗ, ಉಪ್ಪಾರ ಸಮುದಾಯ ಬಳೆಗಾರ, ಮುಸ್ಲಿಂ ಮತ್ತು ಕೆಲವೇ ಕೆಲವು ಕ್ರೈಸ್ತ ಕುಟುಂಬಗಳನ್ನು ಕಾಣಬಹುದಾಗಿದೆ. ಇವರಲ್ಲದೆ ಬೇರೆ ಬೇರೆ ಕಡೆಯಿಂದ ಬಂದು ವ್ಯಾಪಾರ ವಾಣಿಜ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ರಾಜಸ್ಥಾನ ಸೇಟುಗಳು ಮತ್ತಿತ್ತರು ಇಲ್ಲಿ ವಾಸವಾಗಿದ್ದಾರೆ.

ಈ ಊರಿನಲ್ಲಿರುವ ಪ್ರಮುಖ ಬೀದಿಗಳೆಂದರೆ ಎಲೆಕೇರಿ, ಗೌತಮ್ ಬಡಾವಣೆ, ಕಡಕಲುಕೇರಿ, ಬಳೇಪೇಟೆ, ಕಮ್ಮನಕೇರಿ ಹೀಗೆ ಬೇರೆ ಬೇರೆ ಜನಾಂಗದವರು ವಾಸಿಸುವ ಕೇರಿಗಳಿಗೆ (ಬೀದಿ) ಒಂದೊಂದು ಹೆಸರನ್ನು ಇಟ್ಟು ಕರೆಯಲಾಗಿದೆ. ಇಲ್ಲಿನ ಜನತೆಯ ಜೀವನ ವಿಧಾನವು ಹಿಂದೂ ಮುಸ್ಲಿಂರಲ್ಲಿ ಮಾತ್ರ ಭಿನ್ನವಾಗಿ ಕಂಡುಬರುತ್ತದೆ, ಆದರೆ

ಹಿಂದೂಗಳಲ್ಲಿರುವ ಅನೇಕ ಜಾತಿಗಳಲ್ಲಿ ಸಾಮಾನ್ಯವಾಗಿ ಏಕರೀತಿಯ ಜೀವನ ಪದ್ಧತಿ, ನಂಬಿಕೆ – ಆಚರಣೆಗಳು ಜಾರಿಯಲ್ಲಿವೆ. ಹಿಂದಿನಿಂದಲೂ ಎಲ್ಲಾ ಕಡೆಗಳಲ್ಲೂ ನಡೆದು ಬಂದಿರುವಂತಹ ಸಾಂಪ್ರದಾಯಿಕ ಹಬ್ಬಗಳಾದ ಗೌರಿಗಣೇಶನ ಹಬ್ಬ, ದೀಪಾವಳಿ ಹಬ್ಬ, ಮಹಾಲಯ ಅಮಾವಾಸ್ಯೆ, ಸಂಕ್ರಾಂತಿ, ಮಹಾಶಿವರಾತ್ರಿ, ಯುಗಾದಿ ಹಬ್ಬಗಳನ್ನು ಹಿಂದೂ ಧರ್ಮೀಯರು ಆಚರಿಸಿದರೆ, ಮುಸ್ಲಿಮರು ರಂಜಾನ್, ಬಕ್ರೀದ್ ಮುಂತಾದ ಸಣ್ಣಪುಟ್ಟ ಹಬ್ಬಗಳನ್ನು ಆಚರಿಸುತ್ತಾರೆ. ಈ ಆಚರಣೆಗಳಲ್ಲಿ ಧರ್ಮ ಭೇದವಿಲ್ಲದೆ ಅವರ ಆಚರಣೆಗಳಲ್ಲಿ ಇವರು, ಇವರ ಹಬ್ಬ ಹರಿದಿನಗಳಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡು ಪರಸ್ಪರ ಸಂತೋಷವನ್ನು ಹಂಚಿಕೊಂಡು ಆಚರಿಸುತ್ತಾರೆ. ಜನನ, ಮರಣ, ನಾಮಕರಣ, ಮದುವೆ ಇತ್ಯಾದಿಗಳಿಗೆ ಸಂಬಂಧಿಸಿದ ಆಚರಣೆಗಳು ಅವರವರ ಜಾತಿಧರ್ಮದ ಅನ್ವಯದಲ್ಲಿಯೇ ನಡೆಯುತ್ತದೆ.

**ಸಾಮಾಜಿಕ ಆಚರಣೆಗಳು**

ಜನಪದ ಸಮಾಜವು ಸಮಷ್ಟೀಕೃತ ಸಾವಯವ ಸಮಾಜ, ಈ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವನ ಚಿತ್ರದ ಎಲ್ಲಾ ಪ್ರಮುಖ ಘಟ್ಟಗಳೂ ವಿಶಿಷ್ಟ ಸಾಂಸ್ಕೃತಿಕ ಘಟನೆಗಳೇ ಆಗಿವೆ. ಹುಟ್ಟು, ಸಾವು, ಮದುವೆ, ದಾಂಪತ್ಯ, ಮುತ್ತೈದೆತನ, ತಾಯ್ತನಗಳನ್ನು ಮೌಲ್ಯಗಳನ್ನಾಗಿ ಅಂಗೀಕರಿಸಿದ್ದ ಜನಪದರು ತಮ್ಮ ಬದುಕಿನುದ್ದಕ್ಕೂ ಅವುಗಳಿಗೆ ನಿಷ್ಠರಾಗಿ ಬಾಳಿಕೊಂಡು ಬಂದವರು. ಮಗು ಹುಟ್ಟಿದಾಗ ಆಚರಿಸುವ ಜನನ ಕರ್ಮಗಳಿಂದ ಹಿಡಿದು ಸತ್ತವರಿಗಾಗಿ ಇದ್ದವರು ತಲೆ ಬೋಳಿಸಿಕೊಂಡು ತಿಥಿ ಮಾಡುವವರೆಗೂ ಕಂಡುಬರುವ ವೈವಿಧ್ಯಮಯ ವಿಧಾನಗಳು, ಆಚರಣೆಗಳು ಬುಡಕಟ್ಟು ಸಂಸ್ಕೃತಿಗಳಲ್ಲಿ ಕಂಡುಬರುವ ಸಂಪ್ರದಾಯ ಬೆಳವಣಿಗೆಯೇ ಆಗಿವೆ.

**ಹುಟ್ಟು:** ಯಳಂದೂರಿನಲ್ಲಿ ಹುಟ್ಟು ಎಂಬ ಆಚರಣೆಯನ್ನು ಬಹಳ ನಿಯಮಬದ್ಧವಾಗಿ ಶ್ರದ್ಧೆಯಿಂದ ಆಚರಿಸಿಕೊಂಡು ಬಂದಿದ್ದಾರೆ. ಸಾಮಾನ್ಯವಾಗಿ ಈ ಹುಟ್ಟು ಎಂಬ ಆಚರಣೆಯನ್ನು ಎಲ್ಲರೂ ಒಂದೇ ರೀತಿ ಅನುಸರಿಸಿಕೊಂಡು ಬಂದಿದ್ದಾರೆ. ಆದರೆ ಕೆಲವು ಪಂಗಡಗಳಲ್ಲಿ ಸ್ವಲ್ಪ ಮಟ್ಟಿಗೆ ವ್ಯತ್ಯಾಸವಿರುತ್ತದೆ. ಸಾಮಾನ್ಯವಾಗಿ ಈ ತಾಲ್ಲೂಕಿನಲ್ಲಿ ನಡೆದು ಬಂದಿರುವ ಆಚರಣೆಗಳನ್ನು ಸಂಗ್ರಹಿಸಲಾಗಿದೆ. ಹುಟ್ಟು ಎಂಬ ಆಚರಣೆ ಬಗ್ಗೆ ಮಾಹಿತಿಯನ್ನು ಕ್ಷೇತ್ರಕಾರ್ಯದ ಅವಧಿಯಲ್ಲಿ ಹೇಳಿದ್ದು ಹೀಗೆ.

ಹಿಂದೆ ಹೆರಿಗೆಯನ್ನು ಮನೆಯಲ್ಲಿಯೇ ಮಾಡಿಸಲಾಗುತ್ತಿತ್ತು. ಇತ್ತೀಚೆಗೆ ಆಸ್ಪತ್ರೆಗಳಲ್ಲಿ ಹೆರಿಗೆಯನ್ನು ಮಾಡಿಸಲಾಗುತ್ತದೆ. ಪ್ರತಿಯೊಂದು ಹೆಣ್ಣು ತಾನು ಗರ್ಭಧರಿಸಿದ ಅನಂತರದಲ್ಲಿ ಅಂದರೆ ಐದು ಅಥವಾ ಏಳು ತಿಂಗಳಾದ ಮೇಲೆ ತನ್ನ ತವರು ಮನೆಗೆ ಹೋಗಲು ಹಾತೊರೆಯುತ್ತಾಳೆ. ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕೆಂದು ಸಂಪ್ರದಾಯ ಕಡ್ಡಾಯವಾಗಿದೆ. ಗರ್ಭಧರಿಸಿದವಳ

ಗಂಡನು ಆಕೆಗೆ ಹೆರಿಗೆಯಾಗುವವರೆಗೆ ಅಶುದ್ಧನಾಗಿರುತ್ತಾನೆ. ಆತ ಗಡ್ಡ ಬಿಟ್ಟಿರುತ್ತಾನೆ. ಆತನಿಗೆ ತನ್ನ ಸಂಬಂಧಗಳ ಶವವನ್ನು ಸಾಗಿಸಲು ಹೆಗಲು ಕೊಡುವ ಅವಕಾಶವಿರುವುದಿಲ್ಲ.

**ಸೀಮಂತ:** ಮೊದಲ ಬಾಣಂತನಕ್ಕಾಗಿ ಸೊಸೆಯನ್ನು ತವರಿಗೆ ಕಳುಹಿಸಿ ಕೊಡುವಾಗ ಸೀಮಂತ ಮಾಡಲಾಗುವುದು ಆ ದಿನ ಗರ್ಭಿಣಿಗೆ ವಸ್ತ್ರಾಭರಣಗಳನ್ನು ತೊಡಿಸಿ ಆಕೆ ಬಯಸುವ ತಿಂಡಿತಿನಿಸುಗಳನ್ನು ಮಾಡಿಕೊಡಲಾಗುತ್ತದೆ. ಅಲ್ಲದೆ ಗರ್ಭಿಣಿಯ ಬಯಕೆಯನ್ನು ಈಡೇರಿಸಲು ನೆಂಟರು ಇಷ್ಟರು ತಿಂಡಿಗಳನ್ನು ಮಾಡಿ ತಂದು ಕೊಡುತ್ತಾರೆ. ಒಂದು ಪಕ್ಷ ಆಕೆಯ ಬಯಕೆ ಈಡೇರದಿದ್ದರೆ ಪ್ರಸವದ ಸಮಯದಲ್ಲಿ ಗರ್ಭಿಣಿಗೆ ಇಲ್ಲವೆ ಮಗುವಿಗೆ ತೊಂದರೆಯಾಗುತ್ತದೆ ಎಂಬ ನಂಬಿಕೆ ಇದೆ. ಹಾಗಾಗಿ ಬಸುರಿಯ ಎಲ್ಲಾ ಬಯಕೆಗಳನ್ನು ತೀರಿಸಬೇಕೆಂಬ ನಿಯಮವಿದೆ. ಸೀಮಂತದ ಸಮಯದಲ್ಲಿ ಹಸೆಮಣೆಯ ಮೇಲೆ ಗರ್ಭಿಣಿಯನ್ನು ಕೂರಿಸಿ ಅರಿಸಿನ-ಕುಂಕುಮವನ್ನು ಹಣೆಗೆ ಹಚ್ಚಿ ಐದು ಜನ ಮುತ್ತೈದೆಯರು ಶಾಸ್ತ್ರ ಮಾಡುತ್ತಾರೆ. ಶಾಸ್ತ್ರದ ಸಮಯದಲ್ಲಿ ಅವಳ ಮುಂದೆ ಇಟ್ಟಿದ್ದ ಹಲವು ರೀತಿಯ ತಿನಿಸು ಮತ್ತು ಹಣ್ಣು, ಕಾಯಿ, ಅಕ್ಕಿ, ಬೆಲ್ಲವನ್ನು ಹೆಣ್ಣಿನ ಮಡಿಲಿಗೆ ಹಾಕಿ ಹುಟ್ಟುವ ಮಗುವಿನ ಜನನ ಉತ್ತಮವಾಗಿರಲಿ ಎಂದು ಮುತ್ತೈದೆಯರು ಹಾರೈಸುತ್ತಾರೆ. ಆ ದಿನ ಬಂದ ನೆಂಟರಿಷ್ಟರಿಗೆ ಒಳ್ಳೆಯ ಊಟವನ್ನು ಮಾಡಿಸಿರುತ್ತಾರೆ. ನಂತರ ಅಂದೆ ಗರ್ಭೀಣಿಯನ್ನು ತವರುಮನೆಗೆ ಕಳುಹಿಸಿಕೊಡುತ್ತಾರೆ.

ಈ ರೀತಿಯ ಸೀಮಂತವನ್ನು ಚೊಚ್ಚಲ ಗರ್ಭಿಣಿಗೆ ಮಾತ್ರ ಮಾಡುತ್ತಾರೆ. ಅಷ್ಟೇ ಅಲ್ಲದೆ ಬಾಣಂತನವನ್ನು ಅವಳ ಎರಡು ಮಗುವಿಗೆ ಮಾತ್ರ ತಾಯಿಯ ಮನೆಯವರು ಮಾಡುತ್ತಾರೆ. ಎರಡಕ್ಕಿಂತ ಹೆಚ್ಚಿನ ಮಗುವನ್ನು ಆ ಹೆಣ್ಣು ಹಡೆದರೆ ಆಗ ಬಾಣಂತನವನ್ನು ಗಂಡನ ಮನೆಯವರು ಮಾಡಬೇಕಾಗುತ್ತದೆ. ಗರ್ಭೀಣಿಗೆ ಹೆರಿಗೆ ನೋವು ಕಾಣಿಸಿಕೊಂಡಾಗ ಆಸ್ಪತ್ರೆಗೆ ಸೇರಿಸುತ್ತಾರೆ. ಹೆರಿಗೆಯಾದ ಮೇಲೆ ೧೨ ದಿನಗಳವರೆಗೆ ಸೂತಕವೆಂದು ಪರಿಗಣಿಸಲಾಗುತ್ತದೆ. ಇದನ್ನು ಮುತ್ತೈದೆ ಸೂತಕ ಎಂದು ಕರೆಯುತ್ತಾರೆ. ಸೂತಕ ಕಳೆಯುವವರೆಗೆ ಯಾರೂ ಕೂಡ ಆ ಮನೆಯಿಂದ ಯಾವೊಂದು ಪದಾರ್ಥವನ್ನು ಪಡೆದುಕೊಳ್ಳುವುದಿಲ್ಲ. ೧೨ ದಿನಗಳ ನಂತರ ಬಾಣಂತಿಯನ್ನು ನೋಡಲು ಬಯಸುವವರು ಕಾಲನ್ನು ತೊಳೆದುಕೊಂಡು ಒಳಗೆ ಬರಬೇಕು ಇಲ್ಲವಾದರೆ ಮಗು ಬಾಣಂತಿಗೆ ಕಾಲುದೂಳಾಗುತ್ತದೆ ಎಂಬ ನಂಬಿಕೆಯಿದೆ. ಹೆರಿಗೆಯಾದ ೧೨ನೆಯ ದಿನಕ್ಕೆ ಸೂತಕವನ್ನು ತೆಗೆದು ಅಂದೆ ಮಗುವಿಗೆ ನಾಮಕರಣ ಮಾಡಲಾಗುತ್ತದೆ. ಈ ಸಮಯದಲ್ಲಿ ದಾಸಯ್ಯನನ್ನು ಕರೆಸಿ ಮನೆಯಲ್ಲಿ, ಪೂಜೆ ಮಾಡಿಸಿ ಅವನಿಂದ ಮಗುವಿಗೆ ಹೆಸರನ್ನು ಕಟ್ಟಿಸುತ್ತಾರೆ.

## ಬಾಣಂತಿಯರ ಆಚಾರ ಮತ್ತು ಸಂಪ್ರದಾಯಗಳು

ಬಾಣಂತಿಯರು ಇರುವ ಮನೆಯಲ್ಲಿ ಗ್ರಹಗತಿಗಳು ಬರದಿರಲೆಂದು ಮನೆಯ ಮುಂದೆ ಎರಡೂ ಕಡೆ ಚಪ್ಪಲಿಯನ್ನು ಬಿಟ್ಟಿರುತ್ತಾರೆ. ಮೂರು ದಿನಕ್ಕೊಮ್ಮೆ ತಾಯಿ-ಮಗುವಿಗೆ ಸ್ನಾನ ಮಾಡಿಸುತ್ತಿದ್ದರು. ಹಿಂದಿನ ದಿನವೇ ಸಜ್ಜಿಗೆ ಮಾಡಿ ಅದನ್ನು ಬೆಳಿಗ್ಗೆ ಕಾಫಿಕೊಟ್ಟ ನಂತರ ಕೊಡುತ್ತಿದ್ದರು. ಸ್ನಾನ ಮಾಡಿಸಿದ ದಿನ ಅವರೆಕಾಳು ಸಾರು ಅಥವಾ ಹುರಿದ ಹುರುಳಿಕಾಳು ಸಾರು ಅಥವಾ ಮಾಂಸದ ಸಾರನ್ನು ಮಾಡಿ ಬಾಣಂತಿಗೆ ಯಾರು ಇಲ್ಲದ ಜಾಗದಲ್ಲಿ ಊಟ ಬಡಿಸುತ್ತಿದ್ದರು. ಕುಡಿಯಲು ಬಿಸಿ ನೀರನ್ನು ಅಳತೆಯಾಗಿ ಕೊಡುತ್ತಿದ್ದರು.

ಬಾಣಂತಿ ಹೊರಗಡೆ ಹೋಗುವಾಗ ನಿಶಾಚರರ ಕಾಟದಿಂದ ತಪ್ಪಿಸಿಕೊಳ್ಳಲು ಕಸಪೊರಕೆಯ ಕುಡಿ ಮತ್ತು ಕಬ್ಬಿಣವನ್ನು ಹಿಡಿದು ಹೋಗುತ್ತಿದ್ದರು. ಬಾಣಂತಿ ಮೂರು ತಿಂಗಳು ಕುಂಕುಮವಿಡುತ್ತಿರಲಿಲ್ಲ. ಇದಕ್ಕೆ ಕಾರಣ ಕುಂಕುಮ ಇಟ್ಟುಕೊಂಡರೆ ಆ ಸಮಯದಲ್ಲಿ ಅವರ ಸೌಂದರ್ಯ ಹೆಚ್ಚುತ್ತದೆ. ಇದರಿಂದ ಹೊರಗಿನವರು ನೋಡಿದಾಗ ಅವಳಿಗೆ ದೃಷ್ಟಿಯಾಗುತ್ತದೆಂದು ಕುಂಕುಮ ಇಟ್ಟುಕೊಳ್ಳುತ್ತಿರಲಿಲ್ಲ. ಮಗು ಬಾಣಂತಿಯರಿಗೆ ಐದು ತಿಂಗಳು ಕಳೆದು ಮೇಲೆ ಬಾಣಂತಿಗೆ ಸ್ವಲ್ಪ ಸ್ವಲ್ಪ ಮುದ್ದೆಯನ್ನು ಕೊಟ್ಟು ದಿನದಿಂದ ದಿನಕ್ಕೆ ಹೆಚ್ಚಿಸುತ್ತಾ ಬರುತ್ತಾರೆ.

ಬಾಣಂತಿಗೆ ಕೊಬ್ಬರಿ-ಬೆಲ್ಲವನ್ನು ಕೊಡುತ್ತಾರೆ. ಕೆಲವು ಸಾರಿ ಮೆಣಸಿನ ಸಾರನ್ನು ಮಾಡಿ ಕೊಡುತ್ತಿದ್ದರು. ಊಟವಾದ ನಂತರ ಎಲೆ-ಅಡಿಕೆಯನ್ನು ಬಳಸುತ್ತಿದ್ದರು. ಈ ಸಮಯದಲ್ಲಿ ಹಲಸಿನ ಹಣ್ಣು ಮತ್ತು ಕುಂಬಳ ಕಾಯಿಯ ಸಾರನ್ನು ಊಟ ಮಾಡಬಾರದು ಇದರಿಂದ ಮಗುವಿಗೆ ಅನಾರೋಗ್ಯ ಉಂಟಾಗುತ್ತದೆಂದು ಭಾವಿಸುತ್ತಿದ್ದರು. ಕೆಲವು ಸಾರಿ ಬಾಣಂತಿಗೆ ಬಿಸಿ ಅನ್ನಕ್ಕೆ ಉಪ್ಪು ಮೆಣಸನ್ನು ಹಾಕಿ ಕೊಡುತ್ತಿದ್ದರು.

ಪುಟ್ಟ ಮಕ್ಕಳು ಚಂಡಿ ಹಿಡಿದರೆ ಮಾರಮ್ಮನ ದೇವಸ್ಥಾನಕ್ಕೆ ಹೋಗಿ ಪೂಜಿಸಿಕೊಂಡು ಬರುತ್ತಿದ್ದರು. ಮಗುವಿಗೆ ಹೊಟ್ಟೆ ಗಟ್ಟಿಯಾದಾಗ ಅಥವಾ ಹೊಟ್ಟೆ ನೋವು ಬಂದಾಗ ಊನಿ ಹಂಬಿನ ಸೊಪ್ಪನ್ನು ತಂದು ಅದಕ್ಕೆ ಹರಳೆಣ್ಣೆಯನ್ನು ಹಚ್ಚಿ ದೀಪದಲ್ಲಿ ಬಿಸಿ ಮಾಡಿಕೊಂಡು ಮಗುವಿನ ಹೊಟ್ಟೆಯ ಮೇಲೆ ಐದಾರು ಸಾರಿ ಕಾಯಿಸಿ ಹಾಕಿ ಹೊಟ್ಟೆ ನೋವನ್ನು ಮನೆಯಲ್ಲಿಯೇ ಕಡಿಮೆ ಮಾಡುತ್ತಿದ್ದರು. ಕೆಲವು ಸಾರಿ ಈ ರೀತಿಯ ನೋವಿಗೆ ಹರಳೆಣ್ಣೆಯನ್ನು ಮಗುವಿಗೆ ಕುಡಿಸುತ್ತಿದ್ದರು.

ಕಿವಿ ನೋವು ಉಂಟಾದಾಗ ಹರಳೆಣ್ಣೆಯನ್ನು ಕಾಯಿಸಿ ಹಾಕುತ್ತಿದ್ದರು. ಅದಕ್ಕೆ ಶೀತವಾಗಿದ್ದರೆ ರಾಗಿ ಹಿಟ್ಟನ್ನು ತೆಗೆದುಕೊಂಡು ಅದರ ಮೈಗೆ ಹಚ್ಚುತ್ತಿದ್ದರು.

ಮಗುವಿಗೆ ದೃಷ್ಟಿಯಾಗಿದ್ದರೆ ಚಂಡಿ ಹಿಡಿಯುತ್ತಿತ್ತು. ಆಗ ಹಿರಿಯರು ಅದನ್ನು ಗುರುತಿಸಿಕೊಂಡು ಮಗು ದೃಷ್ಟಿ ತೆಗೆಯುತ್ತಿದ್ದರು. ಹಿಂದೆ ಮಗುವಿಗೆ ಸುಮಾರು ಎರಡು ವರ್ಷಗಳ ಕಾಲ ತಾಯಿ ಮಗುವಿಗೆ ತನ್ನ ಹಾಲನ್ನು ಕುಡಿಸುತ್ತಿದ್ದಳು. ಹೀಗೆ ಹಲವು ತಿಂಗಳು ಕಳೆದ ನಂತರ ಮಗುವಿಗೆ ಸ್ವಲ್ಪ ಸ್ವಲ್ಪ ಮುದ್ದೆ ಮತ್ತು ಅನ್ನವನ್ನು ಕೊಟ್ಟು ರೂಢಿ ಮಾಡುತ್ತಿದ್ದರು.

ಹಿಂದೆ ದಿನಕ್ಕೆ ಎರಡು ಸಾರಿ ಹರಳೆಣ್ಣೆಯನ್ನು ಮಗುವಿಗೆ ಹಚ್ಚುತ್ತಿದ್ದರು ಎದೆ ಹಾಲು ಮತ್ತು ಹರಳೆಣ್ಣೆಯನ್ನು ಬೆರೆಸಿ ಪ್ರತಿ ದಿನ ಒಂದು ತಿಂಗಳ ಕಾಲ ಮಗುವಿಗೆ ನೆಕ್ಕಿಸುತ್ತಿದ್ದರು. ಈ ರೀತಿ ಮಾಡಿದರೆ ಮಗುವಿನ ಬೆಳವಣಿಗೆ ಚೆನ್ನಾಗಿರುತ್ತದೆ ಎಂಬ ನಂಬಿಕೆಯಿತ್ತು.

ಅಗಸೆ ಗಿಡದಿಂದ ಹಣ್ಣಾದ ಎಲೆಯನ್ನು ತಂದು ಎಣ್ಣೆಯಲ್ಲಿ ಎಲೆಯನ್ನು ಹಾಕಿ ಕಾಯಿಸಿ ಅದನ್ನು ನೆಕ್ಕಿಸಿದರೆ ಮಗುವಿನ ಹೊಟ್ಟೆ ಶುದ್ಧಿಯಾಗುತ್ತಿತ್ತು. ಸುಮಾರು ಹದಿನೈದು ದಿನಕ್ಕೊಮ್ಮೆ ಈ ರೀತಿ ಮಾಡುತ್ತಿದ್ದರು. ಮಗುವಿಗೆ ಮೂರು ತಿಂಗಳಾದ ಮೇಲೆ ಹಸುವಿನ ಬೆಣ್ಣೆ ಕಾಯಿಸಿ ಪ್ರತಿ ದಿನ ಕುಡಿಸುತ್ತಿದ್ದರು. ಮಗುವಿನ ತಾಯಿ ಹೊರಗಿನಿಂದ ಬಂದಾಗ ಹೊರಗಡೆಯೆ ಕುಳಿತು ಯಾವುದಾದರು ಗೋಡೆಗೆ ಹಾಲನ್ನು ಕರೆದು ನಂತರ ಮಗುವಿನ ಬಳಿಗೆ ಹೋಗುತ್ತಿದ್ದರು.

**ಪ್ರೌಢಸಂಸ್ಕಾರ:** ಮಾನವನು ಜನನ ಅನಂತರ ಆತ ಬಾಲ್ಯಾವಸ್ಥೆಯನ್ನು ಕಳೆದು ಪ್ರೌಢಾವಸ್ಥೆಯನ್ನು ತಲುಪುತ್ತಾನೆ. ಆ ಕ್ರಿಯೆ ಗಂಡು-ಹೆಣ್ಣು ಇಬ್ಬರಲ್ಲಿಯೂ ಕಂಡುಬರುತ್ತದೆ. ಇಬ್ಬರಲ್ಲಿಯೂ ದೈಹಿಕವಾಗಿ ಕೆಲವು ಬದಲಾವಣೆಗಳಾಗುತ್ತವೆ. ಹೆಣ್ಣಿನ ಈ ದೈಹಿಕ ಬದಲಾವಣೆಯನ್ನು ಋತುಮತಿ, 'ಮೈನೆರೆದವಳು' ದೊಡ್ಡವಳಾದವಳು ಎಂದು ಇತ್ಯಾದಿ ಹೆಸರುಗಳಿಂದು ಕರೆಯುತ್ತಾರೆ.

ಹೆಣ್ಣು ದೊಡ್ಡವಳಾದಾಗ ಮೊದಲಿಗೆ ತಾಯಿಗೆ ಹೇಳುವ ಹಾಗಿಲ್ಲ ಹಾಗೆ ಹೇಳಿದರೆ ಮುಂದೆ ಅವರಿಬ್ಬರೂ ದ್ವೇಷಿಗಳಾಗುತ್ತಾರೆ. ಇಲ್ಲವೆ ತಾಯಿಗೆ ಕೆಟ್ಟದಾಗುತ್ತದೆ ಎಂಬ ನಂಬಿಕೆಯಿದೆ. ಹಾಗಾಗಿ ತಾಯಿಗೆ ಗೊತ್ತಾದರೂ ಬೇರೆಯವರಿಂದ ಕೇಳಿ ತಿಳಿಯಬೇಕು. ಹೆಣ್ಣು ಋತುಮತಿಯಾದಾಗ ವಾರವನ್ನು ಮೊದಲು ಗಮನಿಸುತ್ತಾರೆ. ಶನಿವಾರ, ಸೋಮವಾರಗಳನ್ನುಳಿದು ಇತರ ವಾರಗಳು ಅಂದರೆ ಮಂಗಳವಾರ, ಬುಧವಾರ, ಶುಕ್ರವಾರಗಳಾದರೆ ಅವು ಶುಭ ದಿನಗಳು ಆದರೆ ಶನಿವಾರ, ಸೋಮವಾರ ಮೈನೆರೆದರೂ ಪರ್ವಾಗಿಲ್ಲ ವೇಳೆ ಚೆನ್ನಾಗಿದ್ರೆ ಸಾಕು ಎಂಬ ನಂಬಿಕೆಯೂ ಇದೆ.

ಹೆಣ್ಣು ಮಗಳು ಋತುಮತಿಯಾದ ಸುದ್ದಿ ಕಿವಿಗೆ ಬಿದ್ದಕೂಡಲೇ ಆಕೆಗೆ ಅರಿಶಿನ ಲೇಪಿಸಿ ನೀರೆರೆಯುತ್ತಾರೆ. ಅನಂತರ ಆಕೆಯ ಸೋದರ ಮಾವ ಹೊಸಬಟ್ಟೆ,

ಕೊಬ್ಬರಿ, ಕಲ್ಲುಸಕ್ಕರೆ, ಎಣ್ಣೆ, ಸೀಗೆಕಾಯಿ, ಕೋಳಿಗಳನ್ನು ತಂದುಕೊಡುವುದು ಸಂಪ್ರದಾಯ. ಇಂತಹ ಹೆಣ್ಣು ಮಕ್ಕಳನ್ನು ಹಿಂದೆ ಗುಳ್ಳಿನಲ್ಲಿ ಇರಿಸುತ್ತಿದ್ದರು. ಹೆಣ್ಣು ಋತುಮತಿಯಾದ ಸಮಯ ಸರಿಯಲ್ಲದೆ ಇದ್ದರೆ ಶಾಸ್ತ್ರವನ್ನು ಕೇಳಿ ಯಾವ ವಾರದ ದಿನ ಋತುಮತಿಯಾದಳು ಆ ವಾರದ ದೇವತೆಗೆ ಸಂಬಂಧಿಸಿದಂತೆ ಪೂಜೆ ಮಾಡಿಸುತ್ತಾರೆ ಹಾಗೂ ಇತ್ತೀಚೆಗೆ ಹುಡುಗಿಗೆ ಹೊಸಬಟ್ಟೆ ಹಾಕಿಸಿ ಹಸೆಮಣೆಯ ಮೇಲೆ ಕೂರಿಸಿ ಮುತ್ತೈದೆಯರು ಆರತಿ ಬೆಳಗುವ ಕಾರ್ಯಕ್ರಮವಿದೆ.

ಈ ಸಂದರ್ಭದಲ್ಲಿ ಸುಮಾರು ಮೂರು ತಿಂಗಳು ಆಕೆಗೆ ಆರೈಕೆ ಮಾಡುತ್ತಾರೆ. ಅಂದರೆ ಉದ್ದಿನ ಕಾಳು, ಬೆಲ್ಲ, ತುಪ್ಪ, ಕೊಬ್ಬರಿಯನ್ನು ಮಿಶ್ರಣಮಾಡಿ ಕೊಡುತ್ತಾರೆ. ಇದರಿಂದ ಶಕ್ತಿ ಬರುತ್ತದೆ ಎಂದು ಹೇಳುತ್ತಾರೆ.

**ಮದುವೆ:** ಹಿಂದೂ ಸಂಪ್ರದಾಯದಂತೆ ಮದುವೆ ಎಂಬುದು ವ್ಯಕ್ತಿಯ ಜೀವನದಲ್ಲಿ ಅತ್ಯಂತ ಪವಿತ್ರವಾದ ಸಂಬಂಧ ಮತ್ತು ಪ್ರಮುಖವಾದ ಕರ್ತವ್ಯ. ಯಳಂದೂರಿನ ಜನತೆಯ ಮನೋಧೋರಣೆಯು ಇದಕ್ಕೆ ಹೊರತಾದುದಲ್ಲ. ವಿವಾಹದ ಸಂದರ್ಭದಲ್ಲಿ ನಮ್ಮ ಜನಪದರು ತಮ್ಮದೇ ಆದ ರೀತಿಯಲ್ಲಿ ಹಲವಾರು ಸಂಪ್ರದಾಯಗಳನ್ನು ರೂಢಿಸಿಕೊಂಡು ಬಂದಿದ್ದಾರೆ.

ಮದುವೆ ಗಂಡು ಹೆಣ್ಣಿನ ಬಾಳಿನಲ್ಲಿ ಮಹತ್ವದ ಘಟ್ಟವಾದರೂ ಹೆಣ್ಣು ಮಕ್ಕಳ ಬಾಳ ಪುಟವನ್ನು ಬದಲಿಸುವ ಒಂದು ಘಟ್ಟ. ತಾಯಿ ತಂದೆಯ ಅಕ್ಕರೆಯ ಮಗಳಾಗಿ ಬೆಳೆದವಳು ಮುಂದೆ ಒಂದು ಮನೆಯನ್ನು ಬೆಳಗಲು ಹೋಗುವುದು. ನಮ್ಮ ಹಿರಿಯರು ರೂಢಿಸಿಕೊಂಡ ಸಂಪ್ರದಾಯವೇ ಈ ಮದುವೆ. ನಮ್ಮ ಮನೆಯಂಗಳದಿ ಬೆಳೆದ ಈ ಹೂವನ್ನು ನಿಮ್ಮ ಮುಡಿಗಿಡಲು ತಂದಿರುವೆವು ಎಂದು ಮಾತಾಪಿತೃಗಳು ತಮ್ಮ ಮಗಳನ್ನು ಧಾರೆ ಎರೆದುಕೊಡುವ ಒಂದು ದಿವ್ಯ ಸನ್ನಿವೇಶ. ತಮ್ಮ ತಮ್ಮ ಮನೆಯನ್ನು ಬೆಳಗಲು ವರನ ಮಾತಾ ಪಿತೃಗಳು ಬರಮಾಡಿಕೊಳ್ಳುವ ಒಂದು ಮಂಗಳ ಮುಹೂರ್ತ ಈ ಮದುವೆ ಹಿಂದೂ ಪದ್ಧತಿಯಂತೆ ಹೆಣ್ಣು ತನ್ನ ತವರು ಮನೆಯನ್ನು ತೊರೆದು ತನ್ನ ಗಂಡನ ಮನೆಯಲ್ಲಿ ಮುಂದಿನ ಜೀವನ ಕಳೆಯಬೇಕು. ಇದು ನಮ್ಮ ಹಿರಿಯರು ಹಾಕಿರುವ ಸಂಪ್ರದಾಯ. ಇಂತಹ ಸಂಪ್ರದಾಯವನ್ನು ಸ್ವಲ್ಪವೂ ಸಡಿಲವಾಗದಂತೆ ಕಾಪಾಡುವುದು ಕಿರಿಯರ ಕರ್ತವ್ಯವಾಗಿದೆ. ಸಾಂಪ್ರದಾಯಿಕ ರೀತಿಯಲ್ಲಿ ಈ ಗ್ರಾಮದವರು ನಡೆಸುವ ವಿವಾಹ ಸಂಪ್ರದಾಯಗಳು ವಿಶಿಷ್ಟವಾಗಿವೆ. ಹೆಣ್ಣು ನೋಡುವುದರಿಂದ ಹಿಡಿದು ಅವಳನ್ನು ಮನೆತುಂಬಿಸಿಕೊಳ್ಳುವವರೆಗಿನ ವಿವಿಧ ನಡಾವಳಿಗಳು ಈ ಜನರ ಸಂಸ್ಕೃತಿಯ ಸೆಲೆಯನ್ನು ಪ್ರತಿಬಿಂಬಿಸುತ್ತದೆ.

ಹಿಂದೆ ಬಾಲ್ಯವಿವಾಹ ಪದ್ಧತಿ ಹೆಚ್ಚಾಗಿ ಇಲ್ಲಿನ ಜನರಲ್ಲಿ ಕಂಡುಬಂದಿತ್ತು. ಹೆಣ್ಣು ಮಗು ಹುಟ್ಟಿದ ತಕ್ಷಣವೇ ಮಗು ಇಂತಹ ಮನೆಗೆ ಸೇರುತ್ತದೆ ಎಂಬ ನಿಶ್ಚಯವೂ ಆಗುತ್ತಿತ್ತು. ನಂತರ ಆ ಮಗು ಋತುಮತಿಯಾಗುವ ಮೊದಲೇ ವಿವಾಹವಾಗಿ ಗಂಡನ ಮನೆಯನ್ನು ಸೇರಿಬಿಡುತ್ತಿದ್ದಳು.

ಕೆಲವು ಸಾರಿ ಬೇರೆ ಮನೆಯಿಂದ ಹೆಣ್ಣನ್ನು ತರಲು ಇಚ್ಛಿಸಿದಾಗ ಮೊದಲು ಶಾಸ್ತ್ರದಂತೆ ಐದು ಜನ ಅಥವಾ ಒಂಬತ್ತು ಜನ ಹೆಣ್ಣಿನ ಮನೆಗೆ ಹೋಗುತ್ತಿದ್ದರು. ಅಲ್ಲಿ ಹೆಣ್ಣಿಗೆ ಹಲವು ಪರೀಕ್ಷೆಯನ್ನು ಒಡ್ಡುತ್ತಿದ್ದರು. ಅವುಗಳಲ್ಲಿ ಹೆಣ್ಣಿನ ಕಾಲನ್ನು ಒದ್ದೆಮಾಡಿಸಿ ನಡೆಸುವುದು ಮತ್ತು ಪಂಚೇಂದ್ರಿಯಗಳು ಸರಿಯಾಗಿದೆಯೋ ಎಂದು ಗಮನಿಸುವುದು ಮುಂತಾದವು.

ಗಂಡಿನ ಮನೆಯವರು ಹೆಣ್ಣಿನ ವಿಚಾರವನ್ನು ಮಾತನಾಡುವಾಗ ಅಲ್ಲಿ ಹೆಣ್ಣೊಬ್ಬಳು ಸೀನಬಾರದು. ಹಾಗೆಯೇ ಹೆಣ್ಣಿನ ಮನೆಯವರು ಗಂಡಿನ ವಿಚಾರವನ್ನು ಮಾತನಾಡುವಾಗ ಅಲ್ಲಿ ಪುರುಷರೊಬ್ಬರು ಸೀನಬಾರದು ಎಂಬ ನಂಬಿಕೆಯಿದೆ. ಈ ರೀತಿ ಯಾವುದೇ ಅಪಶಕುನ ಆಗದೇ ಇದ್ದ ಪಕ್ಷದಲ್ಲಿ ಮದುವೆ ನಡೆಯುತ್ತಿತ್ತು. ಹೆಣ್ಣು ಮದುವೆಗೆ ಮೊದಲು ಗಣಗಲೆ ಹೂವನ್ನು ಮುಡಿಯಬಾರದು, ಮುಡಿದಿದ್ದರೆ ಅವಳ ಮದುವೆಯ ಸಮಯದಲ್ಲಿ ಬಾಸಿಂಗ ಸಿಗುವುದಿಲ್ಲ ಎಂಬ ನಂಬಿಕೆಯಿತ್ತು.

ಮದುವೆಗೆ ಮೊದಲು ಕಪ್ಪು ಬಳೆ, ಕಪ್ಪುದಾರ, ಕರಿಮಣಿಯನ್ನು ಬಳಸಬಾರದು ಎಂಬ ನಂಬಿಕೆಯಿದೆ. ಹಿಂದೆ ಮದುವೆ ಮುಂಜಿಗಳು ಮನೆಯುಲ್ಲಿಯೇ ನಡೆಯುತ್ತಿತ್ತು. ಒಂದು ವಾರವಿದ್ದಾಗಲೇ ನೆಂಟರಿಷ್ಟರು ಮನೆಗೆ ಬಂದು ಎಲ್ಲಾ ಕೆಲಸಕ್ಕೂ ಭಾಗಿಯಾಗುತ್ತಿದ್ದರು. ಚಪ್ಪರದ ದಿನ ಚಪ್ಪರ ಹಾಕಿದ ನಂತರ ಎಲೆ ಅಡಿಕೆಯನ್ನು ಕೊಟ್ಟು ಅತಿಥಿಗಳನ್ನು ಸತ್ಕರಿಸುತ್ತಿದ್ದರು. ಮದುವೆಯ ದಿನ ಅನ್ನ, ಸಾರು, ಪಾಯಸ ಮಾಡಿ ಬಂದ ನೆಂಟರಿಷ್ಟರಿಗೆ ಪ್ರೀತಿಯಿಂದ ಊಟವನ್ನು ಮಾಡಿಸಿ ಕಳುಹಿಸುತ್ತಿದ್ದರು.

ಹಿಂದೆ ವರದಕ್ಷಿಣೆ ಇರಲಿಲ್ಲ. ವಧುವಿಗೆ ದಕ್ಷಿಣೆಕೊಟ್ಟು ವಿವಾಹ ಮಾಡಿಕೊಳ್ಳುತ್ತಿದ್ದರು. ಮದುವೆ ಸಮಾರಂಭಕ್ಕೆ ಎತ್ತಿನ ಗಾಡಿಯನ್ನು ವಾಹನವಾಗಿ ಬಳಸುತ್ತಿದ್ದರು.

**ಮದುವೆ ಶಾಸ್ತ್ರಗಳು**

ಮೊದಲಿಗೆ ಹುಡುಗಿಯನ್ನು ಒಂದಿಬ್ಬರು ಪುರುಷರು ನೋಡಿಬಂದು ಇಷ್ಟವಾಗಿದ್ದರೆ ಹೆಂಗಸರಿಗೆ ಹೇಳಿ ನಂತರ ಇನ್ನೊಂದು ದಿನ ಹೆಂಗಸರು ಮತ್ತು ಹುಡುಗನು ಹೋಗಿ ಬಂದು ಅವರಿಗೂ ಇಷ್ಟವಾದರೆ ಹುಡುಗಿಯ ಮನೆಯವರನ್ನು ಬರಲು ಹೇಳಿದ ಮೇಲೆ ಹುಡುಗಿಯ ಕಡೆಯವರು ಶಾಸ್ತ್ರದಂತೆ ಐದು ಅಥವಾ

ಒಂಬತ್ತು ಜನ ಬಂದು ಹೋದ ನಂತರ ಮತ್ತೆ ಹುಡುಗನ ಮನೆಯವರು ಹೂವು ಮುಡಿಸುವ ಶಾಸ್ತ್ರವನ್ನು ಮಾಡುತ್ತಿದ್ದರು.

ಈ ಶಾಸ್ತ್ರದ ನಂತರ ಅರಿಸಿನ ಬಳೆಶಾಸ್ತ್ರ ಮಾಡುತ್ತಿದ್ದರು. ಇದಕ್ಕೆ ಹುಡುಗನ ಮನೆಯವರು ಹುಡುಗಿ ಮನೆಗೆ ಬರುವಾಗ ಐದು ತರದ ಹಣ್ಣುಗಳನ್ನು ಮತ್ತು ಸೀರೆ ಬ್ಲೌಸು, ಬಳೆ, ಹೂವು ಇವೆಲ್ಲವನ್ನು ತೆಗೆದುಕೊಂಡು ಬಂದು ಐದು ಜನ ಮುತ್ತೈದೆಯರು ಶಾಸ್ತ್ರ ಮಾಡುತ್ತಾರೆ. ಎಲ್ಲಾ ರೀತಿಯ ಹಣ್ಣುಗಳನ್ನು ಒಂದೊಂದು ತೆಗೆದುಕೊಂಡು ಐದು ಜನ ಯಜಮಾನರಿಗೆ ಹಂಚುತ್ತಾರೆ. ನಂತರ ಊಟ ಮಾಡಿ ಹುಡುಗನ ಮನೆಯವರು ಹೊರಡುತ್ತಾರೆ.

ಇದಾದ ನಂತರ ಲಗ್ನಕಟ್ಟಿಸುವುದು. ಇದರಲ್ಲಿ ಮದುವೆ ದಿನ ಗೊತ್ತಾಗುತ್ತದೆ. ಆಗ ಹಪ್ಪಳ ಶಾಸ್ತ್ರವನ್ನು ಒಂದು ದಿನ ನಿಗದಿ ಮಾಡಿ ಐದು ಜನ ಮುತ್ತೈದೆಯರನ್ನು ಕರೆದು ಐದು ಮಣೆ ಮತ್ತು ಐದು ಲಟ್ಟಣಿಗೆ ಇಟ್ಟು ಹುಡುಗಿಯನ್ನು ಹಸೆಮಣೆಯ ಮೇಲೆ ಕೂರಿಸಿ ಐದು ಜನ ಮುತ್ತೈದೆಯರು ತಾವು ಕುಂಕುಮವಿಟ್ಟುಕೊಂಡು ಮತ್ತು ಹುಡುಗಿಗೂ ಇಟ್ಟು ಪ್ರತಿ ಮುತ್ತೈದೆಯರು ಐದು ಐದು ಹಪ್ಪಳವನ್ನು ಒತ್ತಬೇಕು. ಈ ಹಪ್ಪಳಗಳು ಮುರಿಯಬಾರದು ಎಂಬ ನಂಬಿಕೆಯಿದೆ.

ಚಪ್ಪರ ಮೂರು ದಿನ ಇದೆ ಅನ್ನುವಾಗ ಐದು ಜನ ಮುತ್ತೈದೆಯರು ಐದು ದಾರದ ಎಳೆ, ಒನಕೆ, ಒಳಕಲ್ಲು ಹಾಗೂ ಐದು ಅಥವಾ ಒಂಬತ್ತು ಸೇರು ಅಕ್ಕಿ ಮತ್ತು ಐದು ಮೊರ ಎಲ್ಲವನ್ನು ಇಟ್ಟು ಪೂಜಿಸುತ್ತಾರೆ. ಆ ಮೇಲೆ ಐದು ಜನ ಮುತ್ತೈದೆಯರು ಅಕ್ಕಿ ಕುಟ್ಟುತ್ತಾರೆ. ಕುಟ್ಟಿದ ನಂತರ ಐದು ಎಳೆಯನ್ನು ತಾಳಿಗೆ ಕಟ್ಟಿಕೊಳ್ಳುತ್ತಾರೆ. ಇದು ತಮ್ಮ ಮುತ್ತೈದತನ ಶಾಶ್ವತವಾಗಿರಲಿ ಎಂಬ ನಂಬಿಕೆ ಇದಕ್ಕೂ ಮೊದಲು ಒಂದು ಮನೆಯಲ್ಲಿ ಒಂದು ತಲೆಯಂತೆ ಚಾವಡಿಗೆ ಬರಬೇಕು. ಬಂದ ನಂತರ ಅಲ್ಲಿ ಅಕ್ಕಿ ಬೇಳೆ ಮಾಡುವುದು ಹಾಗೆಯೇ ಹಪ್ಪಳವನ್ನು ಅಲ್ಲಿಯೇ ಒತ್ತಬೇಕು.

ಮದುವೆ ಮೂರು ದಿನವಿದೆ ಎನ್ನುವಾಗ ಹುಡುಗನ ಮನೆಯವರು ಹುಡುಗಿಯ ಮನೆಗೆ ಹೋದಾಗ ಹೊಸ ಸೀರೆ, ಬ್ಲೌಸು ಹಣ್ಣು, ಹೂವು, ಕಡ್ಲೆ ಮತ್ತು ಬೆಲ್ಲವನ್ನು ತೆಗೆದುಕೊಂಡು ಹೋಗುತ್ತಾರೆ. ನಂತರ ಹುಡುಗನ ಕಡೆಯ ಯಜಮಾನರು ಹನ್ನೆರಡು ಜನ ಎಲ್ಲರೂ ಒಂದು ಸ್ಥಳದಲ್ಲಿ ಎದುರು ಬದುರಾಗಿ ಕೂರುತ್ತಾರೆ. ಇವರಿಬ್ಬರೂ ಐದೈದು ಸೇರು ಅಡಿಕೆ ಮತ್ತು ಹತ್ತತ್ತು ಕಟ್ಟು ಎಲೆಗಳನ್ನು ತೆಗೆದುಕೊಂಡು ಕೊಡುಕೊಳ್ಳುವ ಮಾತುಕತೆ. ಹೀಗೆ ತುಂಬಿದ ಬಿಂದಿಗೆಯ ಮುಂದೆ ಇಬ್ಬರು ಒಪ್ಪಂದ ಮಾಡಿಕೊಳ್ಳುತ್ತಾರೆ. ಇದಾದ ಮೇಲೆ ಎರಡು ಕಡೆಯವರ ಎಲೆ, ಅಡಿಕೆಯನ್ನು ಬೆರೆಸಿ ಅದನ್ನು ಹದಿನಾರು ಹಳ್ಳಿಗೆ ಹಂಚಿಬಿಡುತ್ತಾರೆ. ಇದನ್ನೆ ವೀಳ್ಯೆ

ಕೊಡುವುದು ಎನ್ನುತ್ತಾರೆ. ಈ ರೀತಿ ಮಾಡುವುದರಿಂದ ಹದಿನಾರು ಹಳ್ಳಿಯವರ ಸಹಕಾರ ಎರಡು ಕಡೆಯವರಿಗೆ ದೊರೆಯುತ್ತದೆ.

ಹಿಂದೆ ಸರ್ವೇಸಾಮಾನ್ಯ ಹುಡುಗನ ಮನೆಯಲ್ಲಿ ಮದುವೆ ನಡೆಯುತ್ತಿತ್ತು. ಚಪ್ಪರದ ದಿನವೇ ಬಂಧು ಬಳಗದವರು ಸೇರುತ್ತಿದ್ದರು. ಚಪ್ಪರ ಹಾಕಿ ನಂತರ ಅನ್ನ, ಸಾರು, ಪಾಯಸವನ್ನು ಮಾಡಿ ಎಲ್ಲರೂ ಊಟ ಮಾಡಿದ ಮೇಲೆ ರಾತ್ರಿಯ ಸಮಯದಲ್ಲಿ ಹುಡುಗನನ್ನು ಮಣೆಯ ಮೇಲೆ ಕೂರಿಸಿ ಐದು ಜನ ಮುತ್ತೈದೆಯರು ಶಾಸ್ತ್ರ ಮಾಡುತ್ತಾರೆ. ಹುಡುಗನ ಸೋದರಮಾವನ ಸಹಾಯವನ್ನು ಪಡೆದು ಎಣ್ಣೆ ಅರಿಸಿನವನ್ನು ಹಚ್ಚಿ ಸ್ನಾನ ಮಾಡಿಸುತ್ತಾರೆ.

ಹೀಗೆ ಹುಡುಗಿಯ ಮನೆಯಲ್ಲಿಯು ಮದುವೆ ಹಿಂದಿನ ದಿನ ನೆಂಟರಿಷ್ಟರು ಸೇರಿ ಚಪ್ಪರ ಹಾಕಿ ಅನ್ನ, ಸಾರು, ಪಾಯಸಮಾಡಿ ಊಟ ಮಾಡುತ್ತಾರೆ. ರಾತ್ರಿಗೆ ಬಂದ ನೆಂಟರು ಹುಡುಗಿಯ ಮೈಗೆ ಎಣ್ಣೆ ಅರಿಸಿನವನ್ನು ಹಚ್ಚಿ ಐದು ಜನ ಮುತ್ತೈದೆಯರು ಅವಳಿಗೆ ಸ್ನಾನಮಾಡಿಸಿ ಹೊಸ ಸೀರೆಯನ್ನು ಉಡಿಸುತ್ತಾರೆ.

ಈ ಕಡೆ ಹುಡುಗನ ಮನೆಯಿಂದ ಅಕ್ಕಿ, ಬೆಲ್ಲ, ಈರುಳ್ಳಿ, ರವೆ, ಉಪ್ಪು, ನವಧಾನ್ಯಗಳು, ಗಂಧದ ಕಡ್ಡಿ, ಕರ್ಪೂರ, ಎಲೆ ಅಡಿಕೆ, ಬಾಚಣಿಗೆ, ಸೀಗೆಪುಡಿ, ಅರಳೆಣ್ಣೆ, ಬಾಳೆಎಲೆ ಹೀಗೆ ಹಲವು ವಸ್ತುಗಳನ್ನು ಹೊಸ ಕುಕ್ಕೆಯಲ್ಲಿ ಹಾಕಿಕೊಂಡು ಬರುತ್ತಾರೆ. ಈ ಎಲ್ಲಾ ಸಾಮಾನುಗಳನ್ನು ತಂದ ನಂತರ ಅವರು ದೇವರ ಕೋಣೆಯಲ್ಲಿ ಇಡುತ್ತಾರೆ. ಹೀಗೆ ಮಾಡಿದರೆ ಎರಡೂ ಮನೆಯವರು ಹೊಂದಾಗುತ್ತೇವೆ ಎಂಬ ನಂಬಿಕೆ ಅವರಲ್ಲಿತ್ತು.

ಕಬ್ಬಿಣದ ಉಂಗುರ, ಐದು ಕೊಂಬೆಯ ಅರಿಸಿನ ಕೊನೆ ಇವೆಲ್ಲವನ್ನು ಉರುಗುದಾರದಲ್ಲಿ ಕಟ್ಟಿ ಇದಕ್ಕೆ ಅರಿಸಿನ ಬಟ್ಟೆಯನ್ನು ಸುತ್ತಿ ನಂತರ ಹುಡುಗನ ಮನೆಯಿಂದ ಬಂದ ಕುಕ್ಕೆಗೆ ಇದನ್ನು ಸೇರಿಸುತ್ತಾರೆ.

ಹುಡುಗಿಗೆ ಎಣ್ಣೆ ಅರಿಸಿನ ಹಾಕಿ ಸ್ನಾನಮಾಡಿಸಿ ಹೊಸ ಸೀರೆ ಉಡಿಸಿ ಹೊಸ ಚಾಪೆಯ ಮೇಲೆ ಕೂರಿಸಿರುತ್ತಾರೆ. ಆ ಹುಡುಗಿ ಒಂದು ಸೆರೆ ಅಕ್ಕಿಯನ್ನು ಹೊಸಮೊರದಿಂದ ತೆಗೆದುಕೊಂಡು ಕೈಯಲ್ಲಿ ಹಿಡಿದುಕೊಂಡಾಗ ಐದು ಜನ ಮುತ್ತೈದೆಯರು ಶಾಸ್ತ್ರ ಮಾಡಿದ ನಂತರವೇ ಹುಡುಗಿಯ ಸೋದರ ಮಾವ ಕಂಕಣಕ್ಕೆ ಪೂಜಿಸಿ ಹುಡುಗಿಯ ಕೈಗೆ ಕಟ್ಟುತ್ತಾರೆ. ಇದಾದ ಮೇಲೆ ದೇವರಿಗೆ ಎಡೆಹಾಕಿ ಪೂಜಿಸಿ ಊಟ ಮಾಡಬೇಕು. ಈ ರೀತಿ ಕಂಕಣ ಕಟ್ಟಿದ ಮೇಲೆ ಹುಡುಗಿ ಬಲಗೈಯಲ್ಲಿ ಊಟ ಮಾಡಬಾರದು. ಈ ರೀತಿಯೆ ಹುಡುಗನ ಮನೆಯಲ್ಲಿಯು ಮಾಡಿಕೊಳ್ಳುತ್ತಾರೆ.

ಮಾರನೆ ದಿನ ಹುಡುಗಿಯನ್ನು ಹುಡುಗನ ಮನೆಗೆ ಕರೆದುಕೊಂಡು ಹೋಗುವಾಗ ಅರ್ಧಂಬರ್ಧ ಕುಟ್ಟಿದ ಐದು ಅಥವಾ ಒಂಬತ್ತು ಪಾವು ಭತ್ತದ ಅಕ್ಕಿಗೆ ಐದು ಧಾನ್ಯಗಳನ್ನು ಮತ್ತು ಒಂದುಕಾಲು ರೂ.ಗಳನ್ನು ಸೇರಿಸಿ ಒಂದು ಬಟ್ಟೆಯಲ್ಲಿ ಕಟ್ಟುತ್ತಿದ್ದರು. ಇದನ್ನೇ ಸೋಗಲು ಪೊಟ್ಟಣವೆಂದು ಕರೆಯುತ್ತಿದ್ದರು. ಈ ಪೊಟ್ಟಣವನ್ನು ಹುಡುಗಿಯ ತಂಗಿ ಹಿಡಿದುಕೊಳ್ಳಬೇಕು.

ಕಪ್ಪು ಎಳ್ಳು ಮತ್ತು ಜೀರಿಗೆಯನ್ನು ಬೆರೆಸಿ ಸಣ್ಣ ಮಡಿಕೆಯಲ್ಲಿ ಹಾಕಬೇಕು. ಇನ್ನೊಂದು ಗಡಿಗೆಯಲ್ಲಿ ಎಣ್ಣೆಯನ್ನು ಹಾಕುವುದು. ನಂತರ ಹುಡುಗಿಗೆ ಹಾಸಿದ ಚಾಪೆಯನ್ನು ಹುಡುಗನ ಮನೆಗೆ ಹೋಗುವಾಗ ಇವೆಲ್ಲವನ್ನು ಹುಡುಗಿಯ ತಮ್ಮ ಹಿಡಿದುಕೊಳ್ಳಬೇಕು.

ಹುಡುಗಿಯು ತಂದೆ ಮನೆಯಿಂದ ಹೊರಬರುವಾಗ ಅವಳ ತಮ್ಮ ನಡುಮನೆಯಲ್ಲಿ ಕಂಚಿನ ಹರಣವನ್ನು ಕಾಲಿನ ಮಂಡಿಗೆ ಸಿಕ್ಕಿಸಿಕೊಂಡು ನಿಲ್ಲಬೇಕು. ಹುಡುಗಿ ಒಂದು ಕಾಲನ್ನು ಹೊರಗಿಟ್ಟು ಇನ್ನೊಂದು ಕಾಲನ್ನು ಒಳಗಿಟ್ಟು ನಿಂತಾಗ ಒಬ್ಬ ಮುತ್ತೈದೆ ಹೊಸ ಮೊರದಲ್ಲಿ ಒಂಬತ್ತು ಪಾವು ಅಕ್ಕಿಯನ್ನು ಅದರಲ್ಲಿ ಹಾಕಿ ಹುಡುಗಿಯ ಮುಂದೆ ಹಿಡಿದಾಗ ಅವಳ ಕೈಯಿಂದ ಐದು ಸೆರೆ ಅಕ್ಕಿಯನ್ನು ತೆಗೆದು ತಮ್ಮ ಹಿಡಿದ ಕಂಚಿನ ಹರಣಕ್ಕೆ ಅಕ್ಕಿಯನ್ನು ಎರಚುತ್ತಾ ಅಪ್ಪನ ಮನೆ ಯಾವಾಗಲೂ ಹಾಲು ಉಕ್ಕಿದ ಹಾಗೆ ಇರಲಿ ಎಂದು ಪ್ರಾರ್ಥಿಸುತ್ತಾಳೆ.

ಇದಾದ ನಂತರ ಹುಡುಗಿಯನ್ನು ಎತ್ತಿನ ಗಾಡಿಯಲ್ಲಿ ಹುಡುಗನ ಊರಿಗೆ ಕರೆದುಕೊಂಡು ಹೋಗುತ್ತಾರೆ. ಹುಡುಗಿಯನ್ನು ಹುಡುಗನ ಮನೆ ಕಾಣದ ಹಾಗೆ ಚಾವಡಿಯಲ್ಲಿ ಕೂರಿಸಿರುತ್ತಾರೆ. ಅಲ್ಲಿಗೆ ಎರಡೂ ಕಡೆಯ ಇಪ್ಪತ್ನಾಲ್ಕು ಜನ ಯಜಮಾನರು ಬಂದು ಸೇರುತ್ತಾರೆ. ಆಗ ಹುಡುಗನ ಮನೆಯವರು ಹನ್ನೊಂದು ರೂ.ಗಳನ್ನು (ತೆರುಹಣ) ಅರಿಸಿನ ಬಟ್ಟೆಗೆ ಕಟ್ಟುತ್ತಾರೆ. ಈ ಹಣವನ್ನು ಜೊತೆಗೆ ಮಾಂಗಲ್ಯ, ಕಾಲುಉಂಗುರ, ಕುಂಕುಮ, ಅರಿಸಿನ, ಹೂ ಸೀರೆ ಹೀಗೆ ಒಟ್ಟು ಹನ್ನೆರಡು ಸಾಮಾನುಗಳನ್ನು ಹುಡುಗಿಗೆ ಕೊಡುತ್ತಾರೆ. ಈ ಸಾಮಾನುಗಳಿಂದಲೇ ಹುಡುಗಿಯ ಅಲಂಕಾರ ನಡೆಯುತ್ತಿತ್ತು.

ಕೆಲವು ಸಾರಿ ಹನ್ನೊಂದು ರೂ.ಗಳನ್ನು ಹುಡುಗಿಯ ತಂದೆ ತೆಗೆದುಕೊಳ್ಳದೆ ಹಾಗೆ ಸುಮ್ಮನೆ ಮುಟ್ಟುಬಿಟ್ಟು ಮತ್ತೆ ಅವರಿಗೇ ಕೊಟ್ಟುಬಿಡುತ್ತಿದ್ದರು. ಹುಡುಗನ ಮನೆಯವರು ಹೆಣ್ಣು ಹೆತ್ತ ತಂದೆಗೆ ಹನ್ನೊಂದು ರೂ.ಗಳನ್ನು ಕೊಟ್ಟು ಅವರ ಹೆಣ್ಣು ಮಗಳನ್ನು ತಾವು ಕೊಂಡುಕೊಂಡಂತೆ ಎಂಬ ನಂಬಿಕೆ ಈ ಭಾಗದ ಜನರಲ್ಲಿತ್ತು.

ಹುಡುಗಿಯ ಅಲಂಕಾರವಾದ ನಂತರ ಬಿಳಿ ಕುದುರೆಯ ಮೇಲೆ ಅವಳ ಸೋದರಮಾವ ಕರೆದುಕೊಂಡು ಹೋಗಿ ಬಿಡಬೇಕಿತ್ತು. ಅವಳು ಚಪ್ಪರದ ಮನೆಗೆ ಹೋದ ಮೇಲೆ ಸೋಗಿಲ ಅಕ್ಕಿಯನ್ನು ಹಿರಿಯರು ಹಾಕಿ ಹರಸುತ್ತಿದ್ದರು. ಇದರ ನಂತರ ತೆರೆಯ ಹಿಂದೆ ಹುಡುಗಿಯನ್ನು ಹುಡುಗ ಕಾಣದ ಹಾಗೆ ನಿಲ್ಲಿಸಿ ಒಬ್ಬೊರಿಗೊಬ್ಬರು ತಲೆಯ ಮೇಲೆ ಎಳ್ಳು ಜೀರಿಗೆಯನ್ನು ಎರಚುತ್ತಿದ್ದರು. ಇವೆರಡರ ಅನ್ಯೋನ್ಯತೆಯೇ ನಮ್ಮ ಜೀವನದಲ್ಲಿಯೂ ಬರಲಿ ಎಂದು ಈ ಪದ್ಧತಿಯನ್ನು ಆಚರಿಸಿಕೊಳ್ಳುತ್ತಿದ್ದರು. ಆ ಮೇಲೆ ಸಂಬಂಧ ಮಾಲೆಯನ್ನು ಹುಡುಗ-ಹುಡುಗಿ ಒಬ್ಬರಿಗೊಬ್ಬರು ತೆರೆಯ ಹಿಂದೆಯೆ ಹಾಕಿಕೊಳ್ಳಬೇಕಿತ್ತು.

ಹೀಗೆ ನೇರವಾಗಿ ಹೆಣ್ಣು-ಗಂಡು ಮುಖವನ್ನು ನೋಡಿಕೊಳ್ಳದೇ ಎಣ್ಣೆ ಮತ್ತು ಕನ್ನಡಿಯಿಂದ ಹುಡುಗ-ಹುಡುಗಿಯ ಮುಖವನ್ನು, ಹುಡುಗಿ-ಹುಡುಗನ ಮುಖವನ್ನು ಮೊದಲಿಗೆ ನೋಡಿಕೊಳ್ಳುತ್ತಿದ್ದರು. ಧಾರೆ ಎರೆಯಬೇಕಾದರೆ ಹುಡುಗಿಯ ನಂದಿಬಟ್ಟಲ ಹೂವಿನಿಂದ ಮಾಡಿದ ಮೂರು ದಂಡೆ ಮತ್ತು ಗಂಡನ ಮನೆಯವರ ಎರಡು ದಂಡೆ ಒಟ್ಟು ಐದು ದಂಡೆಯ ಹೂವನ್ನು ಮುಡಿಯಬೇಕಿತ್ತು. ಹುಡುಗನ ಮನೆಯವರು ಹುಡುಗಿಗೆ ಬಾಸಿಂಗವನ್ನು ಕೊಟ್ಟಿರುತ್ತಾರೆ. ಅದನ್ನು ಅವಳು ಹಣೆಗೆ ಕಟ್ಟಿಕೊಳ್ಳಬೇಕು. ಇವೆಲ್ಲದರ ನಂತರ ಮೊದಲಿಗೆ ಹುಡುಗಿಯ ಸೋದರಮಾವ ಧಾರೆ ಎರೆಯಬೇಕಿತ್ತು. ಆ ಮೇಲೆ ಹುಡುಗಿಯ ತಂದೆ ತಾಯಿ ಧಾರೆ ಎರೆದು ಹುಡುಗನ ಮನೆಯವರಿಗೆ ಅವಕಾಶ ಮಾಡಿದ ನಂತರ ನೆಂಟರಿಷ್ಟರು ಧಾರೆ ಎರೆದು ಇವರಿಬ್ಬರ ಜೀವನ ಸುಖವಾಗಿರಲಿ ಎಂದು ಹಾರೈಸುತ್ತಿದ್ದರು. ಹೀಗೆ ಎಲ್ಲರ ಆಶೀರ್ವಾದ ಪಡೆದ ನಂತರ ಮಾಂಗಲ್ಯಧಾರಣೆ ನಡೆಯುತ್ತಿತ್ತು.

ನವದಂಪತಿಯರ ಕೈಯಲ್ಲಿ ಅಂದಿನ ರಾತ್ರಿ ಫಲಪೂಜೆ ಮಾಡಿಸುತ್ತಿದ್ದರು. ಅದಕ್ಕೆ ಒಂಬತ್ತು ಸೇರು ಅಕ್ಕಿ ಒಂಬತ್ತು ಎಳೆನೀರು ಒಂಬತ್ತು ಬಾಳೆಹಣ್ಣು, ಎಲೆ, ಅಡಿಕೆ ಇಟ್ಟು ಪೂಜಿಸುತ್ತಿದ್ದರು. ಇದನ್ನು ಒಂಬತ್ತು ಜನ ಯಜಮಾನರಿಗೆ ಕೊಟ್ಟುಬಿಡುತ್ತಿದ್ದರು. ಅಕ್ಕಿಯ ಒಳಗೆ ಉಂಗುರ ಹಾಕಿ ಐದು ಸಾರಿಯಲ್ಲಿ ಯಾರು ಹೆಚ್ಚು ಸಾರಿ ಅಕ್ಕಿಯಿಂದ ಉಂಗುರ ತೆಗೆಯುತ್ತಾರೋ ಅವರೇ ದಂಪತಿಗಳಲ್ಲಿ ಜೋರು ಎಂಬ ನಂಬಿಕೆಯಿತ್ತು.

ಹೀಗೆ ಪಂದ್ಯವಾದನಂತರ ಆರತಿ ಮಾಡಿ ದೇವರ ಕೋಣೆಯಲ್ಲಿಟ್ಟಿದ್ದ ತುಂಬಿದ ಬಿಂದಿಗೆಗೆ ಹುಡುಗಿ ಮೂರು ಸಾರಿ ಕೈಹಾಕಿ ನಾನು ಇವರಿಗೆ ಸಮಾನ ಎಂದು ಸಾಬೀತುಪಡಿಸುತ್ತಿದ್ದಳು.

ಸಂಜೆ ದಂಪತಿಗಳನ್ನು ಮುಯ್ಯಿಗೆ ಕೂರಿಸುತ್ತಿದ್ದರು. ಆಗ ಹೆಣ್ಣು, ಗಂಡಿನ ಮನೆಯ ಬಟ್ಟೆಯನ್ನು, ಗಂಡು, ಹೆಣ್ಣಿನ ಮನೆಯ ಬಟ್ಟೆ ಹಾಕಿಕೊಂಡಿರುತ್ತಾರೆ. ಇದರ

ನಂತರದ ದಿನ ಎತ್ತಿನ ಗಾಡಿಯ ಮೇಲೆ ನವದಂಪತಿಗಳನ್ನು ಅಲಂಕರಿಸಿ ಮೆರವಣಿಗೆ ಮಾಡುತ್ತಿದ್ದರು. ಇದಾದ ಮೇಲೆ ಬೇರೆಯವರ ಮನೆಯಲ್ಲಿ ಐದು ಜನ ಮುತ್ತೈದೆಯರು ಶಾಸ್ತ್ರ ಮಾಡಿ ದಂಪತಿಗಳಿಗೆ ಕಟ್ಟಿದ ಕಂಕಣ, ಸಂಬಂಧಮಾಲೆ, ಬಾಸಿಂಗ ಎಲ್ಲವನ್ನು ತೆಗೆದು ಒಡಲೆಯ ಒಳಗೆ ಹಾಕಬೇಕು.

ದಂಪತಿಗಳು ತಮ್ಮ ಮನೆಗೆ ಬಂದ ಮೇಲೆ ನೀರು ಕಾಯಿಸಿ ಇಬ್ಬರನ್ನು ಕೂರಿಸಿ ಸಗಣಿಯಿಂದ ಮಾಡಿದ ಐದು ಗೊಂಬದೇವರನ್ನು (ಇದನ್ನೆ ಹಿಂದೆ ಗಣಪತಿ ಎಂದು ಭಾವಿಸುತ್ತಿದ್ದರು) ಇಟ್ಟು ಐದು ಜನ ಮುತ್ತೈದೆಯರು ಶಾಸ್ತ್ರ ಮಾಡಿ ಇಬ್ಬರಿಗೂ ಅರಿಸಿನ, ಸೀಗೆಕಾಯಿ ಹಚ್ಚಿ ಪ್ರತಿಯೊಬ್ಬ ಮುತ್ತೈದೆಯರು ಐದು ಐದು ಚೊಂಬು ನೀರು ಹಾಕಿ ನಂತರ ಹುಡುಗ–ಹುಡುಗಿಗೆ, ಹುಡುಗಿ–ಹುಡುಗನಿಗೆ ನೀರು ಹಾಕಿ ಸ್ನಾನ ಮಾಡಿಸುತ್ತಿದ್ದರು.

ಇದಾದ ನಂತರ ಹೊಸ ಬಟ್ಟೆಯನ್ನು ಇಬ್ಬರು ಹಾಕಿಕೊಂಡು ಹುಡುಗ ಹಸೆಮಣೆ ಮೇಲೆ ನಿಂತುಕೊಂಡಾಗ ಹುಡುಗಿಯಿಂದ ಪಾದ ಪೂಜೆ ಮಾಡಿಸುತ್ತಾರೆ. ಅವನ ಪಾದಕ್ಕಿಟ್ಟಿದ್ದ ಹೂವು, ಕುಂಕುಮ, ಅರಿಸಿನವನ್ನು ಹುಡುಗಿ ತಾನು ಬಳಸಿಕೊಳ್ಳಬೇಕು. ಇದರ ನಂತರ ಹುಡುಗಿ ತನ್ನ ಗಂಡನಿಗೆ ಸಾಮಾನು ತೆಗೆದುಕೊಂಡು ಬಾ ಎಂದು ಹೇಳುವುದು ಆಗ ಆತ ಅಕ್ಕಿ, ಬೇಳೆ, ಉಪ್ಪು, ಖಾರ, ಹುಳಿ, ತರಕಾರಿ ಎಲ್ಲವನ್ನು ತಟ್ಟೆಗೆ ಹಾಕುತ್ತಾನೆ. ಸೋಗಿಲ ಅಕ್ಕಿಯನ್ನು ಹುಡುಗ ಕುಟ್ಟಿದರೆ ಹುಡುಗಿ ಅದನ್ನು ತಳ್ಳಬೇಕು. ಅದು ಅಕ್ಕಿ ಆದ ನಂತರ ಇಬ್ಬರೂ ಸೇರಿ ಬೀಸಿ ಅದಕ್ಕೆ ಬೆಲ್ಲವನ್ನು ಸೇರಿಸಿ ಪಾಯಸ ಮಾಡಬೇಕು. ಹೀಗೆ ಇಬ್ಬರೂ ಸೇರಿ ಮಾಡಿದ ಅನ್ನ, ಸಾಕು ಪಾಯಸವನ್ನು ಸಂಬಂಧಿಕರು ಊಟ ಮಾಡಿ ಸಂತೋಷಪಡುತ್ತಿದ್ದರು.

ಮುಂದೊಂದು ದಿನ ಇವರಿಬ್ಬರಲ್ಲಿ ಅನ್ಯೋನ್ಯತೆ ಕಂಡು ಬರದಿದ್ದಾಗ ಹುಡುಗಿಯನ್ನು ಊರಿನಿಂದ ಹೊರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವಳಿಂದ ಮೂರು ಕಡ್ಡಿಯನ್ನು ತುಂಡು ಮಾಡಿಸಿ, ತಾಳಿ ಮತ್ತು ಕಾಲುಂಗರವನ್ನು ತೆಗೆಸಿ ಹುಡುಗನ ಮನೆಗೆ ಕೊಡಿಸಿ ಬಿಡುತ್ತಿದ್ದರು. ಇದನ್ನೆ ಬಿಡುಗಡೆ ಎಂದು ಕರೆಯುತ್ತಿದ್ದರು. ಈ ರೀತಿ ಹೆಚ್ಚು ನಡೆಯುತ್ತಿರಲಿಲ್ಲ. ಹುಡುಗಿಯೇ ಏನೇ ಕಷ್ಟ ಬಂದರೂ ಸಹಿಸಿಕೊಂಡು ಜೀವಿಸುತ್ತಿದ್ದಳು.

ಹೀಗೆ ಹಿಂದೆ ಮದುವೆ ಸಮಾರಂಭಗಳು ಒಂದು ವಾರ ನಡೆಯುತ್ತಿತ್ತು. ಆ ಸಮಾರಂಭಕ್ಕೆ ಹೆಚ್ಚು ಜನ ಭಾಗಿಯಾಗಿ ತಾವು ಸಂತೋಷ ಪಡುತ್ತಿದ್ದರು. ಆದರೆ ಈ ದಿನಗಳಲ್ಲಿ ದುಡ್ಡೆ ದೊಡ್ಡಪ್ಪ ಅನ್ನುವ ಹಾಗೆ ದುಡ್ಡಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಒಂದೇ ದಿನದಲ್ಲಿ ಮದುವೆಯನ್ನು ಹೊಟೇಲಿನಲ್ಲಿ ಮುಗಿಸಿ ಬಿಡುತ್ತಾರೆ. ಹಾಗಾಗಿ

ಹಿಂದಿನ ಆಚರಣೆಗಳು ಈಗ ಇಲ್ಲದೆ ಇರುವುದರಿಂದ ಹೆಚ್ಚು ಹೆಚ್ಚು ಬಿಡುಗಡೆಗಳೇ ನಡೆಯುತ್ತಾ ಬಂದಿದೆ. ಹಾಗೆಯೇ ಹಿಂದೆ ಇದ್ದ ಸಹಕಾರ ಈ ದಿನಗಳಲ್ಲಿ ಇಲ್ಲ. ಏಕೆಂದರೆ ನಾನು ನನ್ನದು ಎಂಬ ಭಾವನೆ ಇಂದಿಗೆ ಹೆಚ್ಚಾಗಿದೆ.

**ಮರಣಕ್ಕೆ ಸಂಬಂಧಿಸಿದ ಸಂಪ್ರದಾಯಗಳು**

ಅವುಗಳಲ್ಲಿ ಮುಖ್ಯವಾಗಿ ಎಲ್ಲರಲ್ಲೂ ಕಂಡುಬರುವ ಆಚರಣೆಗಳು ಈ ರೀತಿ ಇವೆ. ಈ ಭಾಗದ ಜನರಿಗೆ ಮುಂದಿನ ಹುಟ್ಟಿನ ಬಗೆ ನಂಬಿಕೆಯಿತ್ತು. ಹಾಗಾಗಿ ಅವರು ಸತ್ತ ವ್ಯಕ್ತಿಗೆ ಸಂಪ್ರದಾಯದಂತೆ ಪೂಜೆ, ಪುನಸ್ಕಾರಗಳನ್ನು ಮಾಡಿ ಶವ ಸಂಸ್ಕಾರಗಳನ್ನು ಮಾಡುತ್ತಿದ್ದರು. ಹಾಗೆ ಮಾಡಿದರೆ ಮರಣಿಸಿದ ವ್ಯಕ್ತಿಯ ಈ ಜನ್ಮ ಅಂತ್ಯವಾಗಿ ಮುಂದಿನ ಜನ್ಮ ಉತ್ತಮವಾಗಿರುತ್ತದೆ ಎಂಬ ನಂಬಿಕೆಯಿತ್ತು.

'ಹುಟ್ಟು ಅನಿವಾರ್ಯ ಸಾವು ನಿಶ್ಚಿತ' ಎನ್ನುವಂತೆ ಒಬ್ಬ ವ್ಯಕ್ತಿ ಮರಣ ಹೊಂದಿದಾಗ ಬಂಧು–ಬಳಗದವರು, ಸ್ನೇಹಿತರು, ಬೇರೆ ಬೇರೆ ವರ್ಗದವರು ಬಂದು ಸೇರುತ್ತಿದ್ದರು. ಹಾಗೆ ಬಂದ ಜನರು ಸತ್ತವರ ಕುಟುಂಬಕ್ಕೆ ಸಾಂತ್ವಾನ ಹೇಳಿ ಅವರ ಆಚರಣೆಗಳಲ್ಲಿ ತಾವು ಭಾಗಿಯಾಗುತ್ತಿದ್ದರು.

ವ್ಯಕ್ತಿ ಸತ್ತ ತಕ್ಷಣ ಅಕ್ಕ–ಪಕ್ಕದವರು ಸೇರಿ ಹೆಣವನ್ನು ಅವರ ಜಗುಲಿಯ ಮೇಲೆ ಮಲಗಿಸುತ್ತಿದ್ದರು. ಆ ಮೇಲೆ ಮನೆ ಮುಂದೆ ಬೆಂಕಿ ಹಾಕುತ್ತಿದ್ದರು. ನಂತರ ಹೆಣದ ತಲೆಯ ಹತ್ತಿರ ಕಂಚಿನ ಹರಣದಲ್ಲಿ ಅಕ್ಕಿ –ಬೆಲ್ಲ ಎಲೆ, ಅಡಿಕೆ ವಿಭೂತಿ ಒಂದು ಚೊಂಬು ನೀರು ಮತ್ತು ಒಂದು ದೀಪವನ್ನು ಹಚ್ಚಿ ಇಡುತ್ತಿದ್ದರು. ನೆಂಟರಿಷ್ಟರು ಬಂದ ಮೇಲೆ ಹೆಣಕ್ಕೆ ಒಂದು ಸಾರಿ ಸೀಗೆಪುಡಿಯನ್ನು ಹಾಕಿ ಸ್ನಾನ ಮಾಡಿಸುತ್ತಾರೆ. ಹೆಣಕ್ಕೆ ಅಲ್ಲಿ ಸೇರಿದ ಪ್ರತಿಯೊಬ್ಬರು ನೀರು ಹಾಕುತ್ತಾರೆ.

ಇನ್ನು ಕೆಲವರು ಹೆಣವನ್ನು ಕೂರಿಸಬೇಕಾದರೆ ಬಿದಿರಿನಿಂದಲೇ ಕುರ್ಜ್ಜನ್ನು ಕಟ್ಟಿ ನಾಲ್ಕು ಮೂಲೆಗೂ ಎಳೆನೀರನ್ನೋ ಅಥವಾ ಕಾಯಿಯನ್ನೋ ಆ ಮೇಲೆ ನಾಲ್ಕು ಜನ ಪ್ರಾರಂಭದಲ್ಲಿ ಹೆಗಲನ್ನು ಕೊಡುತ್ತಾರೆ. ನಂತರ ಬೇರೆ ಬೇರೆ ಜನರು ಹೆಗಲನ್ನು ಕೊಟ್ಟು ಮುಂದೆ ಚಲಿಸುತ್ತಾರೆ. ಹೆಣದ ಹಿಂದೆ ಅಕ್ಕಿ, ಬೆಲ್ಲ, ಎಲೆ, ಅಡಿಕೆ, ವಿಭೂತಿ ಇವೆಲ್ಲವನ್ನು ಹಿಡಿದವರು ಬರುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋಗುವಾಗ ಪುರಿಯನ್ನು ಎರಚುತ್ತಾರೆ. ಇದಕ್ಕೆ ಕಾರಣ ಹೆಣವೇನಾದರೂ ಮತ್ತೆ ಊರಿಗೆ ಬರುವ ಪ್ರಯತ್ನ ಮಾಡಿದಾಗ ಅದಕ್ಕೆ ಪುರಿ ಅಡ್ಡವಾಗಿ ಅದನ್ನು ಆರಿಸಿಕೊಂಡು ಬರುವ ವೇಳೆಗೆ ಮುಂಜಾನೆಯ ಸಮಯವಾದಾಗ ಅದು ಮತ್ತೆ ವಾಪಸ್ಸು ಹೋಗಿಬಿಡುತ್ತದೆ ಎಂಬ ನಂಬಿಕೆಯಿತ್ತು. ಅಲ್ಲದೆ ದಾರಿ ಮಧ್ಯೆಯಲ್ಲಿ ಹೋದವರೆಲ್ಲಾ ಹೆಣಕ್ಕೆ ಅಕ್ಕಿ ಮತ್ತು ಕಾಸನ್ನು ಹಾಕುತ್ತಿದ್ದರು.

ಇಷ್ಟರ ಮಧ್ಯದಲ್ಲೆ ಸಮಾಧಿಯಲ್ಲಿ ಮೂರು ಅಡಿ, ಆರಡಿಯಂತೆ ಹಳ್ಳವನ್ನು ತೆಗೆದು ನಂತರ ಹೆಣವನ್ನು ಹೊತ್ತು ತಂದ ಮೇಲೆ ಪೂಜೆಮಾಡಿ ದಕ್ಷಿಣೋತ್ತರವಾಗಿ ಮಲಗಿಸುತ್ತಿದ್ದರು. ಕೆಲವರು ತಲೆಯ ಹತ್ತಿರ ಉಪ್ಪನ್ನು ಹಾಕಿರುತ್ತಾರೆ. ಬಂದವರೆಲ್ಲಾ ಹೆಣಕ್ಕೆ ಮಣ್ಣನ್ನು ಹಾಕುತ್ತಾರೆ. ಸಮಾಧಿಯ ಹತ್ತಿರ ಕೊಟ್ಟ ಎಲೆ, ಅಡಿಕೆಯನ್ನು ತಿಂದು ಉಗಿಯಬೇಕು.

ಹೆಣಕ್ಕೆ ಹಾಸಿದ ಅರ್ಧ ಬಟ್ಟೆಯನ್ನು ತುಂಡು ಮಾಡಿಕೊಂಡು ಅದಕ್ಕೆ ಅವರು ತಂದ ಅಕ್ಕಿ–ಬೆಲ್ಲ–ವಿಭೂತಿ, ಎಲೆ, ಅಡಿಕೆ ಎಲ್ಲವನ್ನು ಹಾಕಿ ಕಟ್ಟಿ ಸಮಾಧಿಯ ಮೇಲೆ ಇಡುತ್ತಿದ್ದರು. ಇದಕ್ಕೆ ಕಾರಣ ನೀನು ಮಾಡಿದ್ದನ್ನು ನೀನೆ ಕಟ್ಟಿ ಉಣ್ಣು ಎನ್ನುವ ಉದ್ದೇಶ. ಅಲ್ಲದೆ ಸಮಾಧಿಯ ನಾಲ್ಕು ಮೂಲೆಗೂ ತುಂಬೆ ಗಿಡವನ್ನು ನೆಡುತ್ತಿದ್ದರು. ಸತ್ತ ವ್ಯಕ್ತಿ ದಾಸರಾದರೆ ಅವರಿಗೆ ತುಂಬಿ ಗಿಡದ ಬದಲು ತುಳಸಿ ಗಿಡವನ್ನು ನೆಡುತ್ತಿದ್ದರು. ಸಮಾಧಿಯಿಂದ ಮುಂದೆ ಬಂದು ಪ್ರತಿಯೊಬ್ಬರೂ ಕಾಲನ್ನು ತೊಳೆದು ನಾವು, ನಿಮ್ಮ ಮುಂದೆ ಬರುತ್ತೇವೆ ಎಂದು ಪ್ರಮಾಣ ಮಾಡಿಕೊಳ್ಳುತ್ತಿದ್ದರು.

ಸಮಾಧಿಯಿಂದ ಎಲ್ಲರೂ ಬಂದ ಮೇಲೆ ಒಬ್ಬ ವ್ಯಕ್ತಿ ಊರಿನ ಹೆಬ್ಬಾಗಿಲಿನ ಹತ್ತಿರ ಕಂಚಿನ ಹರಣದಲ್ಲಿದ್ದ ನೀರನ್ನು ಉದ್ದಕ್ಕೆ ಹಾಕುತ್ತಿದ್ದರು. ಸಮಾಧಿಯಿಂದ ವಾಪಸ್ಸು ಬರುವ ವೇಳೆಗೆ ಇತ್ತ ಸತ್ತ ಮನೆಯನ್ನು ಸಗಣಿ ನೀರಿನಿಂದ ಸ್ವಚ್ಛ ಮಾಡಿರಬೇಕು. ಹೆಣವನ್ನು ಮಲಗಿಸಿದ ಜಾಗವನ್ನು ಸಹ ಸಗಣಿ ಹಾಕಿ ತೊಳೆಯಬೇಕು. ತೊಳೆದ ನೀರನ್ನು ಒಂದು ಹಳ್ಳ ಮಾಡಿ ಬಿಡಬೇಕು ಅಂದರೆ ಅದನ್ನು ಹರಿಯಲು ಬಿಡಬಾರದು. ಒಂದು ಪಕ್ಷ ಆ ನೀರಿಗೆ ಮಕ್ಕಳು ಬಿದ್ದರೆ ತೊಂದರೆ ಎಂಬ ನಂಬಿಕೆಯಿತ್ತು. ಹೀಗೆ ತೊಳೆದ ಮನೆಯಲ್ಲಿ ದೀಪ ಹಚ್ಚಿ ಒಂದು ಕನ್ನಡಿಯನ್ನು ಜೊತೆಗೆ ಸಮಾಧಿಯ ಹಳ್ಳ ತೆಗೆಯಲು ಬಳಸಿದ ಸಲಕರಣೆಯನ್ನು ಇಟ್ಟಿರುತ್ತಾರೆ. ಸಮಾಧಿಯಿಂದ ಬಂದವರೆಲ್ಲರೂ ಇವುಗಳನ್ನು ನೋಡಿ ಕೈಮುಗಿದು ಅವರವರ ಊರಿಗೆ ಹೋಗಬೇಕು.

ಅದೇ ದಿನ ರಾತ್ರಿ ಯಾರು ತುಳಿಯದ ಜಾಗದಿಂದ ಮರಳನ್ನು ತಂದು ಹಾಕಿ ಅದನ್ನು ನಯಸು ಮಾಡಿ ಅದರ ಮೇಲೆ ದೀಪ ಮತ್ತು ನೀರು ಅಥವಾ ಎಳನೀರನ್ನು ಇಟ್ಟು ಆ ರಾತ್ರಿ ಎಲ್ಲಿಯೂ ನೀರನ್ನು ಇಡದೆ ಬೆಳಿಗ್ಗೆ ಎದ್ದು ನೋಡಿದರೆ ಅಲ್ಲಿ ನೀರು ಸ್ವಲ್ಪ ಕಡಿಮೆಯಾಗಿ ಕೆಲವು ಗುರುತುಗಳು ಕಂಡುಬರುತ್ತಿದ್ದವಂತೆ.

ಮೂರನೇ ದಿನಕ್ಕೆ ಅವರು ಇಚ್ಚೆಪಟ್ಟ ಎಲ್ಲ ತಿನಿಸುಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಸತ್ತವರು ದಾಸರಾಗಿದ್ದರೆ ತಿಂಡಿಯನ್ನು ಹೊತ್ತುಕೊಂಡು ಹೋಗುವಾಗ ಒಬ್ಬ ವ್ಯಕ್ತಿ ಚಕ್ರವನ್ನು ಹಿಡಿದು ಹೋಗುತ್ತಾರೆ. ಆಗ ಯಾರಾದರೂ ಅಪ್ಪಿ ತಪ್ಪಿ ನೋಡಿದ್ದರೆ ಅವರಿಗೆ ಆಪತ್ತು ಗ್ಯಾರಂಟಿಯಾಗುತ್ತಿತ್ತು. ಅಲ್ಲಿಗೆ ಹೋದ

ಮೇಲೆ ಬೆಂಕಿ ಹಾಕಿ ತಿಂಡಿಯನ್ನು ಸಮಾಧಿಯ ಮೇಲಿಟ್ಟು ಹೋದವರೆಲ್ಲಾ ಪೂಜಿಸುತ್ತಾರೆ. ಆಗ ಕಾಗೆ ಬಂದು ಸತ್ತ ವ್ಯಕ್ತಿ ಇಚ್ಚೆಪಡುತ್ತಿದ್ದ ತಿಂಡಿಯನ್ನೆ ತೆಗೆದುಕೊಂಡು ಹೋಗುತ್ತದೆ. ಆಗ ಅವರ ಮನೆಯವರು ಸತ್ತ ವ್ಯಕ್ತಿಯ ಆಸೆ ಈಡೇರಿತು ಎಂದು ನೆಮ್ಮದಿಯಿಂದ ಮನೆಗೆ ವಾಪಸ್ಸು ಹೋಗುತ್ತಾರೆ.

ಒಂದು ಪಕ್ಷ ಕಾಗೆ ಎರಗದಿದ್ದರೆ ಸತ್ತವರ ಆಸೆ ಈಡೇರಲಿಲ್ಲವೆಂದು ಚಿಂತೆಯಿಂದ ಹಸುವನ್ನು ಕರೆದುಕೊಂಡು ಬಂದು ತುಳಿಸಿಬಿಡುತ್ತಾರೆ. ಇಲ್ಲಿಂದ ಮನೆಗೆ ಹೋದ ಮೇಲೆ ಸಮಾಧಿಗೆ ತೆಗೆದುಕೊಂಡು ಹೋದ ತಿಂಡಿಯನ್ನೇ ಮನೆಯಲ್ಲೂ ಅರ್ಧದಷ್ಟು ಇಟ್ಟು ಹೋಗಿರುತ್ತಾರೆ. ನಂತರ ಮನೆಗೆ ಬಂದು ಒಂದೆ ಮಡಿಕೆಯಲ್ಲಿ ಅಡುಗೆ ಮಾಡಿ ಇದನ್ನು ಮತ್ತು ಮನೆಯಲ್ಲೇ ಇಟ್ಟ ತಿಂಡಿಯನ್ನು ಸೇರಿಸಿ ನೆಲದಲ್ಲೇ ಎಡೆ ಹಾಕಿ ಪೂಜಿಸುತ್ತಾರೆ. ನಂತರ ಮನೆಯವರೆಲ್ಲಾ ಊಟ ಮಾಡಿ ಉಳಿದ ಊಟವನ್ನು ಅಡುಗೆ ಮಾಡಿದ ಮಡಿಕೆಗೆ ಹಾಕಿಕೊಂಡು ಹಸಿರು ಬೇಲಿಗೆ ಹಾಕಿ ಬಂದು ಸ್ನಾನ ಮಾಡುತ್ತಿದ್ದರು. ಇದೇ ದಿನ ಹೆಣನ್ನು ಹೊತ್ತ ನಾಲ್ಕು ಜನರನ್ನು ಕರೆದು ಅವರ ಭುಜವನ್ನು ತೊಳೆಯುತ್ತಾರೆ. ಕಾರಣ ಹೆಣ ಹೊತ್ತ ಬಾರವನ್ನು ಕಡಿಮೆ ಮಾಡಲು ಈ ರೀತಿ ಮಾಡುತ್ತಾರೆ. ಹನ್ನೊಂದನೆ ದಿನದ ಒಳಗೆ ಮನೆಯ ಎಲ್ಲ ಬಟ್ಟೆ ಮತ್ತು ಪಾತ್ರೆಗಳನ್ನು ಮಡಿ ಮಾಡಿಕೊಂಡು ಆ ದಿನ ರಾತ್ರಿ ಅನ್ನ, ಸಾರು, ಪಾಯಸ ಅಥವಾ ಮಾಂಸದ ಅಡುಗೆ ಮಾಡಿರುತ್ತಾರೆ. ನಂತರ ದಾಸಯ್ಯನವರನ್ನು ಕರೆಸಿ ಎಡೆಯಿಟ್ಟು ಪೂಜಿಸುತ್ತಾರೆ. ಬಂದ ದಾಸಯ್ಯನವರು ಪೂಜಿಸಿ ಅಲ್ಲಿದ್ದವರಿಗೆಲ್ಲಾ ತುಳಸಿ ನೀರನ್ನು ಕೊಟ್ಟು, ಮನೆಗೂ ಹಾಕುತ್ತಾರೆ. ಅಲ್ಲಿಗೆ ಆ ಮನೆಯವರಿಗಿದ್ದ ಮೈಲಿಗೆ ಹೋಗುತ್ತದೆ.

ಇದಾದ ನಂತರ ಹನ್ನೆರಡನೆ ದಿನಕ್ಕೆ ಹೊರಗಿನ ಜನರನ್ನು ಕರೆದು ಅನ್ನ ಸಂತರ್ಪಣೆ ಮಾಡುತ್ತಿದ್ದರು. ಆಗ ಸತ್ತ ವ್ಯಕ್ತಿ ಎಲ್ಲರ ಹಾರೈಕೆಯಿಂದ ಕೈಲಾಸವನ್ನು ಪ್ರವೇಶ ಮಾಡುತ್ತಾನೆ ಎಂಬ ನಂಬಿಕೆಯಿಂದ ಹೆಚ್ಚು ಹೆಚ್ಚು ಜನರನ್ನು ಕರೆದು ಸಂತೃಪ್ತಿಪಡಿಸುತ್ತಿದ್ದರು.

ಹೀಗೆ ಈ ಭಾಗದ ಜನರು ಹಿಂದೆ ಮಾಡುತ್ತಿದ್ದ ಆಚರಣೆಯನ್ನೇ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಎಂತಹ ಬಡವರಾದರೂ ಬೇರೆಯವರಿಂದ ಹಣವನ್ನು ಪಡೆದಾರೂ ಶವ ಸಂಸ್ಕಾರ ಆಚರಣೆಯನ್ನು ಮಾಡುತ್ತಾರೆ. ಕೆಲವು ಸಾರಿ ಊರಿನ ಜನರೇ ಹಣವನ್ನು ಸೇರಿಸಿಕೊಂಡು ಶವಸಂಸ್ಕಾರವನ್ನು ಮಾಡುತ್ತಾ ಬಂದಿದ್ದಾರೆ. ಈ ರೀತಿ ಬೇರೆಯವರಿಗೆ ಸಹಾಯ ಮಾಡಿದರೆ ಸಹಾಯ ಮಾಡಿದವರ ಜೀವನ ಉತ್ತಮವಾಗಿರುತ್ತದೆ ಎಂದು ಹಿಂದಿನಿಂದಲೂ ಈ ಭಾಗದ ಜನರು ನಂಬಿದ್ದಾರೆ.

**ಕೆಲವು ನಂಬಿಕೆ ಮತ್ತು ಆಚರಣೆಗಳು:**

ಹಿಂದೆ ಯಳಂದೂರಿನ ಜನರು ಸೂರ್ಯ, ಚಂದ್ರನನ್ನು ದೇವರೆಂದು ಪೂಜಿಸುತ್ತಿದ್ದರು. ಆಕಾಶದಲ್ಲಿ ಸೂರ್ಯ-ಚಂದ್ರಗ್ರಹಣ ಉಂಟಾದಾಗ ಈ ಭಾಗದ

ಜನರಿಗೂ ಮೈಲಿಗೆಯಾಗುತ್ತಿತ್ತು. ಹಾಗಾಗಿ ಗ್ರಹಣ ಹಿಡಿಯುವುದಕ್ಕೆ ಸುಮಾರು ಸಮಯವಿದೆ ಎಂದಾಗಲೇ ಅಡುಗೆ ಮಾಡಿ ಊಟ ಮಾಡುತ್ತಿದ್ದರು. ಗ್ರಹಣ ಹಿಡಿಯುವಾಗ ಮನೆ ಮುಂದೆ ಕಬ್ಬಿಣವನ್ನು ಇಡುತ್ತಿದ್ದರು. ಕೆಲವು ಸಾರಿ ಕಂಚಿನ ಹರಣದಲ್ಲಿ ನೀರು ಹಾಕಿ ಒನಕೆಯನ್ನು ಗ್ರಹಣದ ಸಮಯದಲ್ಲಿ ಇಟ್ಟಾಗ ಕಚ್ಚಿಕೊಳ್ಳುತ್ತಿತ್ತು. ಗ್ರಹಣ ಮುಗಿಯುವವರೆಗೂ ಹಾಗೆಯೇ ನಿಂತಿರುತ್ತಿತ್ತು. ಗ್ರಹಣ ಬಿಟ್ಟ ನಂತರ ಕಚ್ಚಿದ ಒನಕೆ ಬಿಡುತ್ತಿತ್ತು.

ಗ್ರಹಣ ಬಿಟ್ಟ ಮೇಲೆ ಊರಿನ ಜನ ಕೆರೆಕಟ್ಟೆಗಳಿಗೆ ಹೋಗಿ ಸ್ನಾನಮಾಡಿಕೊಂಡು ಹೊಸ ನೀರನ್ನು ತಂದು ಮನೆ ಮಠಗಳನ್ನು ತೊಳೆದುಕೊಂಡು ದೇವರಿಗೆ ಪೂಜಿಸಿ ನಂತರ ಆಹಾರ ಸೇವಿಸುತ್ತಿದ್ದರು. ಗ್ರಹಣದ ಸಮಯದಲ್ಲಿ ಮಗು ಬಾಣಂತಿಯರು ಇದ್ದರೆ ಅದರ ಸೊಂಕು ಇವರಿಗೆ ಬೀಳದಂತೆ ಕಿಟಕಿಯನ್ನು ಮತ್ತು ಬಾಗಿಲನ್ನು ಹಾಕಿಕೊಂಡು ಇರುತ್ತಿದ್ದರು. ಒಂದು ಪಕ್ಷ ಅದರ ಸೊಂಕು ಬಿದ್ದರೆ ಹುಟ್ಟುವ ಮಗು ಅಂಗವಿಕಲರಾಗುತ್ತಾರೆ ಎಂಬ ನಂಬಿಕೆ ಈ ಭಾಗದ ಜನರಲ್ಲಿತ್ತು.

ಗ್ರಹಣವನ್ನು ಬರಿ ಕಣ್ಣಿನಿಂದ ನೋಡಬಾರದು ಒಂದು ಪಕ್ಷ ನೋಡಲೇ ಬೇಕು ಅನ್ನಿಸಿದರೆ ಬೂದುಗನ್ನಡಿಯಲ್ಲಿ ನೋಡುತ್ತಿದ್ದರು. ಇಂದಿನ ದಿನಗಳಲ್ಲಿ ಗ್ರಹಣವನ್ನು ನೋಡಲು ಆಸಕ್ತಿ ಇದ್ದವರು ಕ್ರೀಡಾಂಗಣದಲ್ಲಿ ವ್ಯವಸ್ಥೆ ಮಾಡಿರುತ್ತಾರೆ. ಅಲ್ಲಿಗೆ ಹೆಚ್ಚು ಜನರು ಹೋಗಿ ಗ್ರಹಣವನ್ನು ನೋಡಿ ಆನಂದಿಸುತ್ತಾರೆ.

ಈ ಭಾಗದ ಜನ ಹಿಂದೆ ಹಸಿರು ಅಥವಾ ಅಚ್ಚೆಯನ್ನು ಸರ್ವೇಸಾಮಾನ್ಯ ಹೆಣ್ಣು, ಗಂಡು ಎಂಬ ಭೇದ ಭಾವವಿಲ್ಲದೆ ಎಲ್ಲರೂ ಹಾಕಿಸಿಕೊಳ್ಳುತ್ತಿದ್ದರು. ಇದನ್ನು ಹಾಕುವಾಗ ನೋವಿನ ನಿವಾರಣೆಗೆ ಹಾಡನ್ನು ಹೇಳುತ್ತಿದ್ದರು. ಹಸಿರನ್ನು ಹಾಕಿಸಿಕೊಂಡವರು. ಒಕ್ಕಣೆ ರಾಶಿಯ ಮುಂದೆ ಹೋಗಬಾರದು ಎಂಬ ನಂಬಿಕೆಯಿತ್ತು. ಇದನ್ನು ಹಾಕಿಸಿಕೊಳ್ಳುವುದರ ಉದ್ದೇಶವೇನೆಂದರೆ ವ್ಯಕ್ತಿ ಸತ್ತ ನಂತರ ಅವನ ಅಥವಾ ಅವಳ ಜೊತೆಯಲ್ಲಿ ಏನೂ ಬರುವುದಿಲ್ಲ. ಆದರೆ ಇದು ಜೊತೆಯಲ್ಲಿಯೇ ಬರುತ್ತದೆ ಎಂಬ ನಂಬಿಕೆಯಿಟ್ಟುಕೊಂಡಿದ್ದರು. ಇದನ್ನು ಲಕ್ಷ್ಮೀ ದೇವರೆಂದು ಈ ಭಾಗದ ಜನರು ನಂಬಿದ್ದಾರೆ.

ಹಸು ಕಾಡಿನಿಂದ ಮನೆಗೆ ಬಂದ ಮೇಲೆ ಅದಕ್ಕೆ ಒನಕೆ ಮತ್ತು ಕಸಬರಿಕೆಯನ್ನು ದಾಟಿಸುತ್ತಿದ್ದರು. ಇದಕ್ಕೆ ಕಾರಣವೇನೆಂದರೆ ಹಸುವಿಗೆ ದೃಷ್ಟಿಯಾಗಿದ್ದರೆ ನಿವಾರಣೆಯಾಗಲಿ ಎಂದು ಇದರ ಜೊತೆಗೆ ಏನಾದರೂ ಗ್ರಹಗತಿಗಳು ಸೇರಿಕೊಂಡಿದ್ದರೆ ಅದು ಶರೀರದಿಂದ ಬಿಟ್ಟು ಹೋಗಲಿ ಎಂದು ಈ ಪದ್ಧತಿಯನ್ನು ಆಚರಿಸುತ್ತಿದ್ದರು.

ಈ ಭಾಗದ ಜನರು ಪ್ರಾಣಿಪಕ್ಷಿಗಳನ್ನು ದೇವರೆಂದು ಬಹಳ ಹಿಂದಿನಿಂದಲೂ ಭಾವಿಸುತ್ತಿದ್ದರು. ಇದಕ್ಕೆ ಒಂದು ಉದಾ: ಒಂದು ಕೋತಿ ಆಕಸ್ಮಿಕವಾಗಿ ಊರಿಗೆ ಬಂದು ಸಾವನ್ನಪ್ಪಿದರೆ, ಒಬ್ಬ ದಾಸಯ್ಯನವರು ಕೋತಿಯ ಶವವನ್ನು ತೆಗೆದುಕೊಂಡು ಬಂದು ಊರಿನ ಜನರಲ್ಲಿ ದುಡ್ಡನ್ನು ಪಡೆದುಕೊಂಡು ಒಬ್ಬ ಮನುಷ್ಯ ಸತ್ತಾಗ ಹೇಗೆ ಶವ ಸಂಸ್ಕಾರ ಮಾಡುತ್ತಿದರೊ ಹಾಗೆ ಕುರ್ಜನ್ನು ಕಟ್ಟಿ ಅದನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ನಂತರ ಶವಸಂಸ್ಕಾರವನ್ನು ಮಾಡುತ್ತಿದ್ದರು. ಆಮೇಲೆ ಹನ್ನೆರಡು ದಿನಕ್ಕೆ ತಿಥಿಮಾಡಿ ಹನ್ನೆರಡು ಜನಕ್ಕೆ ಊಟ ಹಾಕುತ್ತಿದ್ದರು. ಹೀಗೆ ಈ ಆಚರಣೆಯನ್ನು ಮಾಡಿದ ದಾಸಯ್ಯನ ಕುಟುಂಬದವರಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯಿದೆ.

ಹೊರಗಡೆಯಿಂದ ಸಂಜೆ ಹೊತ್ತಿಗೆ ಹಸು ಬರುವಾರ ಅದರ ಮುಂದೆ ಮಕ್ಕಳನ್ನು ಬಿಡುತ್ತಿರಲಿಲ್ಲ. ಹಸುವಿನ ಮೇಲೆ ಏನಾದರೂ ಗ್ರಹಗತಿಗಳು ಬಂದು ಸೇರಿಕೊಂಡಿದ್ದರೆ ಅದು ಮಗುವಿಗೂ ಸೇರಿಕೊಳ್ಳುತ್ತಿತ್ತು ಎಂಬ ನಂಬಿಕೆಯಿತ್ತು.

ಹೆಣ್ಣು ಮಕ್ಕಳು ರಾತ್ರಿ ಹೊತ್ತು ಕನ್ನಡಿಯನ್ನು ನೋಡಬಾರದು, ಬಿದ್ದ ಗಾಯಕ್ಕೆ ಕಾಟನ್ ಬಟ್ಟೆಯನ್ನು ಸುಟ್ಟು ಹಾಕಿದಾಗ ರಕ್ತ ನಿಲ್ಲುತ್ತಿತ್ತು. ಅರೆತಲೆ ನೋವು ಬಂದಾಗ ಪೆಂಜನ್ನು ಇಡುತ್ತೀವಿ ಎಂಬ ಹರಕೆಯನ್ನು ಇಟ್ಟುಕೊಳ್ಳುತ್ತಿದ್ದರು. ಇದನ್ನು ಮಾಡುವಾಗ ಉಪವಾಸ ಇರುತ್ತಿದ್ದರು.

ಹಿಂದೆ ಪ್ರತಿ ಮನೆಯ ಬಾಗಿಲು ಕುಳ್ಳಗಿರುತ್ತಿತ್ತು. ಇದಕ್ಕೆ ಕಾರಣ ತಲೆತಗ್ಗಿಸಿ-ಕೊಂಡು ಬಂದರೆ ಅವರಿಗೆ ಕೋಪವಿರುತ್ತಿರಲಿಲ್ಲ.

ಕಾಲನ್ನು ತೊಳೆಯುವಾಗ ಹಿಮ್ಮಡಿಗೆ ನೀರು ಹಾಕಬೇಕು ಇಲ್ಲದಿದ್ದರೆ ಗ್ರಹಶಕ್ತಿಗಳು ಮನೆಗೆ ಬರುತ್ತವೆ ಎಂಬ ನಂಬಿಕೆಯಿತ್ತು.

ಹಿಂದೆ ಮಂಡಿ ನೋವಿನ ನಿವಾರಣೆಯಾಗಬೇಕಾದರೆ ದೇವರ ಕಲ್ಲಿಗೆ ಕೆಲವು ದಿನಗಳು ಪೂಜಿಸಿದರೆ ನೋವು ನಿವಾರಣೆಯಾಗುತ್ತಿತ್ತು. ಮಗುವಿಗೆ ದೃಷ್ಟಿಯಾಗ-ಬಾರದೆಂದರೆ ಕಣ್ಣಿಗೆ ಕಪ್ಪು ಹಾಕಬೇಕು ಎಂದು ಹಿಂದಿನ ಜನರು ನಂಬಿದ್ದರು.

ಹಿಂದೆ ಹಲ್ಲಿಗೆ ಬುಗುರಿ ಎಣ್ಣೆ ಹಾಕುತ್ತಿದ್ದರು. ಸ್ನಾನಕ್ಕೆ ಮೊದಲು ಅರಿಸಿನ ಮತ್ತು ಎಣ್ಣೆಯನ್ನು ಬಳಸುತ್ತಿದ್ದರು.

ಹಲ್ಲು ಉಜ್ಜಲು ಇಟ್ಟಿಗೆ ಪುಡಿಯನ್ನು ಬಳಸುತ್ತಿದ್ದರು.

**ನಾಟಿ ಔಷಧದ ಬಳಕೆ:**

ಹಿಂದೆ ಯಾವುದೇ ರೋಗ ಬಂದರೂ ಅದನ್ನು ಮನೆಯಲ್ಲಿಯೇ ನಿವಾರಿಸಿಕೊಳ್ಳುತ್ತಿದ್ದರು ಎಂಬುದಕ್ಕೆ ಉದಾ: ಒಳಜ್ವರವಿದ್ದಾಗ ಕೈಗಾರಿಕೆ ಸೊಪ್ಪನ್ನು ಬೆಳಿಗ್ಗೆಯೆ ಏನೂ ತಿನ್ನದೆ ಬರಿ ಹೊಟ್ಟೆಗೆ ಅದನ್ನು ಬಳಸುತ್ತಿದ್ದರು.

ಸಕ್ಕರಂ ಸಾಮ್ರಾಣಿ ಸೊಪ್ಪನ್ನು ಹಿಂದೆ ಮೈಯಲ್ಲಿ ಗುಳ್ಳೆ ಬಂದವರು ಅದರ ರಸವನ್ನು ಕುಡಿಯುತ್ತಿದ್ದರು.

ಕೆಮ್ಮು ಬಂದಾಗ ಒಂದು ಲೋಟ ಹಾಲಿಗೆ ಮೆಣಸಿನಪುಡಿ, ಒಂದು ಚಿಟಿಕೆ ಸಕ್ಕರೆ, ಒಂದು ಚಿಟಿಕೆ ಅರಿಸಿನ ಪುಡಿ ಹಾಕಿ ಬಿಸಿಯಾಗಿ ಕುಡಿದು ರೋಗವನ್ನು ಶಮನಮಾಡಿಕೊಳ್ಳುತ್ತಿದ್ದರು.

ನಳ್ಳಿಯನ್ನು ತಂದು ಚೆನ್ನಾಗಿ ಅರೆದು ಅದಕ್ಕೆ ಮೆಣಸು, ಜೀರಿಗೆ, ಉಪ್ಪು ಹಾಕಿ ಬೆರಸಿ, ಒಂದು ನಿಂಬೆ ಹಣ್ಣನ್ನು ಕತ್ತರಿಸಿ ಅದಕ್ಕೆ ಅರೆದುದ್ದನ್ನು ಹಾಕಿ ಒಂದು ಕಡ್ಡಿಯಿಂದ ಚುಚ್ಚಿ ಸ್ವಲ್ಪ ಸಮಯದ ನಂತರ ಅದನ್ನು ಸೇವಿಸಿದರೆ ನೆಗಡಿ ವಾಸಿಯಾಗುತ್ತಿತ್ತು.

ಕಣ್ಣು ಹಸಿರು ಬಂದಾಗ ಅದನ್ನು ಈ ಭಾಗದ ಜನರೇ ತೆಗೆಯುತ್ತಿದ್ದರಂತೆ. ಹೇಗೆಂದರೆ ಕಣ್ಣು ಹಸಿರು ಬಂದ ವ್ಯಕ್ತಿ ಸೂರ್ಯ ಮೂಡುವ ಸಮಯಕ್ಕೆ ಹಸಿರನ್ನು ತೆಗೆಯುವರ ಮನೆಗೆ ಹೋಗಬೇಕು. ಆತ ಕಂಚಿನ ತಟ್ಟೆಯನ್ನು ತೆಗೆದುಕೊಂಡು ಅದಕ್ಕೆ ಅರಿಸಿನ ಬೆರೆಸಿದ ನೀರನ್ನು ಹಾಕಬೇಕು. ನಂತರ ಒಂದು ಹಿಡಿ ಹೊಸ ಅಂಚಿಕಡ್ಡಿಯನ್ನು ತೆಗೆದುಕೊಂಡು ಕಣ್ಣು ಹಸಿರಿನ ವ್ಯಕ್ತಿಗೆ ಮುಖದಿಂದ ಇಳಿತೆಗೆದು ತಟ್ಟೆಯಲ್ಲಿದ್ದ ನೀರಿಗೆ ಹಾಕುತ್ತಾರೆ. ಹೀಗೆ ಹಲವು ಸಾರಿ ಮಾಡುತ್ತಾರೆ. ಇದರಿಂದ ವ್ಯಕ್ತಿಯ ಕಣ್ಣಿನ ಕಲ್ಮಶ ನೀರಿಗೆ ಹೋಗುತ್ತಿತ್ತು. ಈ ರೀತಿ ಮೂರು ದಿನಗಳ ಕಾಲ ಮಾಡಿದರೆ ವ್ಯಕ್ತಿಯ ರೋಗ ಶಮನವಾಗುತ್ತಿತ್ತು.

ಬೇದಿಯಾದವರಿಗೆ ಬಿಳಿಯ ಎಕ್ಕದ ಎಲೆಯನ್ನು ತಂದು ಬೆಳಿಗ್ಗೆ ಹೊಟ್ಟೆಗೆ ತೆಗೆದುಕೊಳ್ಳುವ ಮೊದಲೇ ಕೈ, ಕಾಲು, ನೆತ್ತಿ ಮತ್ತು ಹೆಗಲ ಮೇಲೆ ಬಿಸಿಯಾದ ಎಲೆಯನ್ನು ಇಟ್ಟುಕೊಳ್ಳುತ್ತಿದ್ದರು. ಇದರಿಂದ ಬೇದಿಯಾಗುವುದು ನಿಲ್ಲುತ್ತಿತ್ತು.

ಮುಳ್ಳುಕೀರೆ ಸೊಪ್ಪನ್ನು ತೆಗೆದುಕೊಂಡು ಅದರ ಎಲೆಗೆ ಎಣ್ಣೆ ಹಾಕಿ ಬಿಸಿ ಮಾಡಿ ಗಾಯಕ್ಕೆ ಹಾಕುತ್ತಿದ್ದರು.

ಪಾರಿವಾಳದ ಸೊಪ್ಪಿನ ರಸವನ್ನು ತೆಗೆದುಕೊಂಡು, ಚಿಕ್ಕದಾದ ಬಿಳಿ ಬಟ್ಟೆಯನ್ನು ಕತ್ತರಿಸಿಕೊಂಡು ಅದರ ಮಧ್ಯದಲ್ಲಿ ಒಂದು ರಂಧ್ರಮಾಡಿಕೊಂಡು ಕುರವೆದ್ದ ಜಾಗಕ್ಕೆ ಆ ಬಟ್ಟೆಯನ್ನು ಇಟ್ಟು ಸೊಪ್ಪಿನ ರಸವನ್ನು ರಂಧ್ರದ ಮೂಲಕ ಕುರಕ್ಕೆ ಪದೇ ಪದೇ ಹಾಕಿದಾಗ ಕುರ ಒಡೆದು ಸ್ವಲ್ಪ ದಿನದ ನಂತರ ಗಾಯವಾಸಿಯಾಗುತ್ತಿತ್ತು.

ಊನಿ ಹಂಬನ್ನು ದೊಡ್ಡವರಿಗೆ ಉಷ್ಣವಾದಾಗ ಬಳಸುತ್ತಿದ್ದರು. ಇದರ ಎಲೆಯನ್ನು ಕಿತ್ತುಕೊಂಡು ಬಂದು ದೀಪದಿಂದ ಎಣ್ಣೆ ಹಚ್ಚಿದ ಎಲೆಯನ್ನು ಬಿಸಿಮಾಡಿ ನೆತ್ತಿಗೆ, ಕೈ, ಕಾಲಿಗೆ ಹಾಕಿ ಸ್ವಲ್ಪ ಸಮಯದ ನಂತರ ಬೆಚ್ಚಗಿರುವ ನೀರಿನಿಂದ

ಸ್ನಾನಮಾಡುತ್ತಿದ್ದರು. ಹೀಗೆ ಒಂದೆರಡು ದಿನ ಮಾಡಿದರೆ ಅವರ ಉಷ್ಣವು ಕಡಿಮೆಯಾಗುತ್ತಿತ್ತು.

ಬೆಳಗುಣಿಕೆ ಸೊಪ್ಪಿನ ರಸವನ್ನು ತೆಗೆದುಕೊಂಡು ಆ ರಸವನ್ನು ಬಿಸಿ ಮಾಡಿ ಹಾಕಿದರೆ ಮಗುವಿನ ಕೆಮ್ಮು, ನೆಗಡಿ ವಾಸಿಯಾಗುತ್ತಿತ್ತು. ಹಾಗೆಯೇ ಸುಂಡೆ ಸೊಪ್ಪನ್ನು ಬಳಸಿ ಮಗುವಿನ ಕೆಮ್ಮು ನೆಗಡಿ ವಾಸಿಮಾಡಿಕೊಳ್ಳುತ್ತಿದ್ದರು.

ನಾಗದಾಳಿ ಸೊಪ್ಪನ್ನು ಜ್ವರ ಕೆಮ್ಮಿಗೆ ಬಳಸುತ್ತಿದ್ದರು. ಇದನ್ನು ಮಗುವಿನ ಕೈಗೆ ಇಂದಿಗೂ ಕೆಲವರು ಕಟ್ಟುತ್ತಾರೆ. ಈ ಸೊಪ್ಪನ್ನು ಜೋಗುಳಕ್ಕೆ ಕಟ್ಟಿಕೊಳ್ಳುತ್ತಿದ್ದರು.

**ಹಬ್ಬಗಳು ಮತ್ತು ಆಚರಣೆಗಳು**

ಕರ್ನಾಟಕದ ಸಂಸ್ಕೃತಿಯಲ್ಲಿ ಹಬ್ಬಗಳು, ಜಾತ್ರೆಗಳು, ವಿಶೇಷವಾದ ಸ್ಥಾನವನ್ನು ಪಡೆದುಕೊಂಡಿವೆ. ಮನುಕುಲದ ಇತಿಹಾಸ ಇಂದು ನೆನ್ನೆಯದಲ್ಲ. ಯುಗಯುಗಗಳ ಪರಂಪರೆಯನ್ನು ಹೊಂದಿರುವುದು. ಉನ್ನತಿ ಮತ್ತು ಅವನತಿಯನ್ನು ಕಂಡದ್ದು. ಮಾನವ ತನ್ನ ಸಂಸ್ಕೃತಿ ಪರಂಪರೆಯನ್ನು ಉಳಿಸಿ ಬೆಳೆಸಲು ಹಬ್ಬ ಹರಿದಿನಗಳನ್ನು ನಡೆಸುತ್ತಾರೆ. ನಾಡಹಬ್ಬಗಳ ಜೊತೆಗೆ ಇಂದು ಪ್ರತಿಯೊಂದು ಹಳ್ಳಿಗಳಲ್ಲೂ ಗ್ರಾಮದೇವತೆಗಳಿದ್ದು ಅವುಗಳ ಹಬ್ಬಗಳನ್ನು ಗ್ರಾಮದೇವತೆಯ ಹಬ್ಬವೆಂದು ಆಚರಿಸುತ್ತಾರೆ. ಯಳಂದೂರಿನಲ್ಲಿ ಹಬ್ಬಗಳು, ನಾಡಹಬ್ಬಗಳು ಮತ್ತು ಗ್ರಾಮದೇವತೆಗಳ ಹಬ್ಬಗಳನ್ನು ವಿಶೇಷವಾಗಿ ಆಚರಿಸಲಾಗುತ್ತದೆ.

**ಗೌರಿಗಣೇಶ ಹಬ್ಬ**

ಈ ಹಬ್ಬವನ್ನು ಗ್ರಾಮದ ಜನತೆ ವಿಶೇಷವಾಗಿ ಆಚರಿಸುತ್ತಾರೆ. ಗ್ರಾಮದ ಜನತೆ ತಮ್ಮ ಮನೆಗೆ ಸುಣ್ಣ-ಬಣ್ಣಗಳನ್ನು ಹಚ್ಚಿ ಹಬ್ಬ ಆಚರಿಸುತ್ತಾರೆ. ಬೀದಿಬೀದಿಗಳಲ್ಲಿ ಗೌರಿ ಮತ್ತು ಗಣೇಶನ ವಿಗ್ರಹವನ್ನು ಕೂರಿಸಿ ಚಪ್ಪರ ಹಾಕಿ ಶೃಂಗರಿಸುತ್ತಾರೆ. ಒಂದು ವಾರ ಅಥವಾ ಹದಿನೈದು ತಿಂಗಳುಗಳವರೆಗೆ ಪೂಜೆ ನಡೆಸುತ್ತಾರೆ. ಗೌರಿ ಹಬ್ಬದ ದಿನ ಉನ್ನತ ವರ್ಗದ ಜನತೆ ಹೊಳೆಯಲ್ಲಿ ಮಿಂದು ತಮ್ಮ ಕೈಯನ್ನು ಹೊಳೆಗೆ ಹಾಕಿ ತೆಗೆದಾಗ ಅವರ ಕೈಗೆ ಯಾವ ವಸ್ತು ದೊರೆಯುತ್ತದೆಯೋ ಆ ವಸ್ತುವಿನ ಮೇಲೆ ಗೌರಿ ಬಂದಳೆಂದು ಹೇಳಲಾಗುತ್ತದೆ. ಈ ದಿನ ಬ್ರಾಹ್ಮಣ ವರ್ಗದ ಜನ ಸೊಪ್ಪಿನ ಸಾಂಬಾರು ಮತ್ತು ಅನ್ನವನ್ನು ಮಾಡಿ ಗೌರಿಗೆ ಎಡೆಹಾಕುತ್ತಾರೆ. ನಂತರ ಗಣೇಶನ ಚತುರ್ಥಿಯ ದಿನ ಮನೆಯನ್ನು ಸ್ವಚ್ಛಗೊಳಿಸಿ ಗಣೇಶನಿಗೆ ಪ್ರಿಯವಾದ ಕಡುಬು, ಒಬ್ಬಟ್ಟು, ಎಳ್ಳುಂಡೆಗಳನ್ನು ಮಾಡಿ ಎಡೆಹಾಕಿ ಪೂಜಿಸುತ್ತಾರೆ. ಉಳಿದ ಕೆಳವರ್ಗದ ಜನತೆ ಆ ದಿನ ಮಾರಮ್ಮನ ಒಕ್ಕಲಿನ ಮನೆತನದವರೆಲ್ಲರೂ ಒಟ್ಟಿಗೆ ಸೇರಿ ಸುಮಾರು ೯ ಗಂಟೆಯ ಸಮಯದಲ್ಲಿ ಹೊಸ ಅರಿವೆ (ಮಡಕೆ)ಯನ್ನು ತೆಗೆದುಕೊಂಡು ಜೊತೆಗೆ

ಹಣ್ಣು, ಕಾಯಿ ಹೂವು ಒಟ್ಟಿಗೆ ಅರಿವೆಯಲ್ಲಿ ನೀರನ್ನು ಸೇದಿ ಸಾಲಾಗಿ ಜೋಡಿಸಿ ಪೂಜಿಸಿ ನೀರನ್ನು ತಂದು ಒಲೆ ಹಚ್ಚುತ್ತಾರೆ. ಈ ನೀರು ತರುವುದನ್ನು 'ಹೊಸನೀರು' ತರುವುದು ಎನ್ನುತ್ತಾರೆ. ಅನಂತರ ಬೆಳಗಿನ ಸಮಯದಲ್ಲಿ ಮಾರಮ್ಮನನ್ನು ಪೂಜಿಸುವ ವ್ಯಕ್ತಿಯು ತನ್ನ ಮನೆಯಿಂದ ಮಾಡಿದ ಅನ್ನ, ಸಾರು ಎಳ್ಳುಸೂಸಲುಗಳನ್ನು ಎಡೆಹಾಕಿ ಪೂಜಿಸಿದ ಅನಂತರ ಉಳಿದ ಮನೆಗಳಲ್ಲಿ ಪೂಜೆ ನಡೆಯುತ್ತದೆ. ಎಳ್ಳುಸೂಸಲು ಎಂಬುದನ್ನು ಎಳ್ಳು, ಬೆಲ್ಲ ಮತ್ತು ಏಲಕ್ಕಿಯನ್ನು ಮಿಶ್ರಣ ಮಾಡಿ ಒರಳುಕಲ್ಲಿನಲ್ಲಿ ಹಿಡಿದು ಮಾಡುತ್ತಾರೆ. ಕೆಲವು ನಿರ್ದಿಷ್ಟ ದೇವತೆಗಳ ಮನೆತನದವರು ಇದನ್ನು ಮಾಡುವುದಿಲ್ಲ.

ಗಣೇಶನ ಹಬ್ಬದ ದಿನ ಈ ಗ್ರಾಮದ ಜನತೆ ತಮ್ಮ ಮನೆಯ ಆಯುಧಗಳು, ಹಸುಗಳು, ಒರಳುಕಲ್ಲು ಮತ್ತು ಪುಸ್ತಕಗಳು, ಸೇರು, ಪಾವು, ಕೊಳಗಗಳನ್ನು ಒಂದೆಡೆಯಿಟ್ಟು ಪೂಜಿಸಿ ಎಡೆಹಾಕುತ್ತಾರೆ.

**ಆಯುಧಪೂಜೆ –** ಇದು ವಿಶೇಷವಾಗಿ ಆಯುಧಗಳಿಗೆ ಸಂಬಂಧಿಸಿದ ಹಬ್ಬ. ವಾಹನಗಳು ಮುಂತಾದವುಗಳಿಗೆ ಈ ದಿನ ಪೂಜೆಸಲ್ಲಿಸಲಾಗುತ್ತದೆ. ಬಾವಿಯ ಮೋಟಾರುಗಳಿಗೆ, ವಾಹನಗಳಿಗೆ, ಕೋಳಿಯನ್ನು ಬಲಿಕೊಡುತ್ತಾರೆ. ಈ ದಿನ ಮಲೆ ಮಹದೇಶ್ವರ ಬೆಟ್ಟದಲ್ಲಿ ವಿಶೇಷ ಪೂಜೆ ನಡೆಯುವ ಕಾರಣ ಗ್ರಾಮದ ಹಲವು ಜನತೆ ಜಾತ್ರೆಗೆ ಹೋಗಿ ಪೂಜೆ ಸಲ್ಲಿಸುತ್ತಾರೆ.

**ಮಹಾಲಯ ಅಮಾವಾಸ್ಯೆ:** ಸತ್ತವರಿಗೆ ವರ್ಷಕ್ಕೊಮ್ಮೆ ಎಡೆಹಾಕಿ ಅವರನ್ನು ಸ್ಮರಿಸಿಕೊಳ್ಳುವ ಸಲುವಾಗಿ ಈ ಹಬ್ಬವನ್ನು ಮಹಾಲಯ ಅಮಾವಾಸ್ಯೆಯ ದಿನ ಆಚರಿಸಲಾಗುತ್ತದೆ. ತಮ್ಮ ಮನೆಯಲ್ಲಿ ಇದುವರೆವಿಗೆ ತೀರಿ ಹೋಗಿರುವ ವ್ಯಕ್ತಿಗಳನ್ನು ಸಂತೈಸಲು, ಅವರಿಂದ ಯಾವುದೇ ತೊಂದರೆಗಳು ತಮಗೆ ಬಾರದೆ ಇರಲೆಂದು ಈ ದಿನ ಸತ್ತ ವ್ಯಕ್ತಿಗಳು ಇಷ್ಟಪಡುತ್ತಿದ್ದ ಪ್ರತಿಯೊಂದು ತಿಂಡಿ ತಿನಿಸುಗಳನ್ನು ಅವರ ಬಟ್ಟೆಯನ್ನು ಇಟ್ಟು ಪೂಜಿಸುತ್ತಾರೆ. ಸ್ವಲ್ಪ ಸಮಯ ಮನೆಯ ಎಲ್ಲಾ ವ್ಯಕ್ತಿಗಳು ಹೊರಬಂದು ಕೂರುತ್ತಾರೆ. ಕಾರಣ ಸತ್ತವರು ಬಂದು ತಿನ್ನುತ್ತಾರೆ ಎಂಬ ಮೂಢ ನಂಬಿಕೆಯಿಂದ ಅನಂತರ ಮನೆಯವರೆಲ್ಲ ಸೇರಿ ಊಟಮಾಡಿ ಎಡೆಹಾಕಿದ ವಸ್ತುಗಳನ್ನು ಬೆಳಗಿನ ಸಮಯದಲ್ಲಿ ಹಸಿರು ಬೇಲಿಯಲ್ಲಿ ಇಟ್ಟುಬರುತ್ತಾರೆ.

**ದೀಪಾವಳಿ:** ಇದನ್ನು ದೀವಳಿಗೆ ಹಬ್ಬ ಎಂದು ಕರೆಯಲಾಗುತ್ತದೆ. ಹಬ್ಬದ ಮೊದಲು ಹಲವು ಮರಗಳ ಕಟ್ಟಿಗೆಗಳನ್ನು ಒಣಗಿಸಲಾಗುತ್ತದೆ. ನರಕ ಚತುರ್ದಶಿ, ಬಲಿಪಾಡ್ಯಮಿ, ದೀಪಾವಳಿ ಈ ಮೂರು ದಿನಗಳ ರಾತ್ರಿಯ ವೇಳೆಯಲ್ಲಿ ಈ ಕಡ್ಡಿಯನ್ನು ಉರಿಸುತ್ತಾರೆ. ಈ ಕಡ್ಡಿಯನ್ನು ಗೌರಿಕಡ್ಡಿ ಎಂದು ಕರೆಯಲಾಗುತ್ತದೆ. ಮಣ್ಣಿನ ದೀಪಗಳು ಮೇಣದ

ಬತ್ತಿಗಳನ್ನು ಹಚ್ಚಿ ಈ ಬೆಳಕಿನ ಹಬ್ಬವನ್ನು ಆಚರಿಸುತ್ತಾರೆ. ಪಟಾಕಿಗಳನ್ನು ಹೊಡೆಯುವುದರ ಮೂಲಕ ಮಕ್ಕಳು ಮತ್ತು ಹಿರಿಯರೆಲ್ಲರೂ ಸಂತೋಷಪಡುತ್ತಾರೆ.

ಇದಕ್ಕೆ ಸಂಬಂಧಿಪಟ್ಟಂತೆ ಕಾರ್ತಿಕ ಮಾಸದ ವೇಳೆಯಲ್ಲಿ ಪ್ರತಿ ಸೋಮವಾರ ಮತ್ತು ಶುಕ್ರವಾರಗಳಂದು ಮನೆಯನ್ನು ಸ್ವಚ್ಛಗೊಳಿಸಿ ಪ್ರತಿವಾರ ದೀಪಗಳನ್ನು ಹಚ್ಚುತ್ತಾರೆ ಮತ್ತು ಗ್ರಾಮದೇವತೆಯ ಮಾರಿಗುಡಿಗೆ ದೀಪಗಳನ್ನು ಹಚ್ಚಿಸಿ ಹರಕೆಗಳನ್ನು ತೀರಿಸುತ್ತಾರೆ. ಈ ಮೇಲ್ಕಂಡ ಮೂರು ಹಬ್ಬಗಳು ಅಂದರೆ ಗೌರಿ, ದೀಪಾವಳಿ, ಮಹಾಲಯ ಅಮಾವಾಸ್ಯೆಗೆ ಸಂಬಂಧಿಸಿದಂತೆ ಈ ಗ್ರಾಮದ ಜನತೆ ಒಂದು ಗಾದೆ ಮಾತನ್ನು ಸೃಷ್ಟಿಸಿದ್ದಾರೆ. ಏನೆಂದರೆ "ಗತಿಕೆಟ್ಟ ಗೌರಿ, ಮಸಕೆಟ್ಟ ಮಾರ್ಲಾಮಿ, ದಿಸೆಗೆಟ್ಟ ದೀವಳಿಗೆ" ಎಂದು ಹೇಳುತ್ತಾರೆ. ಇದಕ್ಕೆ ಕಾರಣ ಈ ಹಬ್ಬಗಳ ಸಮಯದಲ್ಲಿ ಯಳಂದೂರಿನ ಸುತ್ತಮುತ್ತ ಗ್ರಾಮದಲ್ಲಿ ಯಾವುದೇ ವ್ಯವಸಾಯಕ್ಕೆ ಸಂಬಂಧಿಸಿದ ಕೆಲಸಗಳು ನಡೆಯುವುದಿಲ್ಲ. ಗೌರಿ ಹಬ್ಬಕ್ಕೂ ಮುಂಚೆಯೇ ಭತ್ತ, ರಾಗಿಯ ನಾಟಿಗಳು ಮುಗಿದು ರೈತರಿಗೆ ಯಾವುದೇ ಕೆಲಸ ದೊರೆಯದ ಕಾರಣ ಈ ಹಬ್ಬಗಳಿಗೆ ಈ ರೀತಿಯ ಗಾದೆಯನ್ನು ಹುಟ್ಟುಹಾಕಿದ್ದಾರೆ. 

**ಷಷ್ಠಿ:** ಈ ಹಬ್ಬದ ದಿನ ಮನೆಯನ್ನು ಸ್ವಚ್ಛಗೊಳಿಸಿ ತಾವು ಸ್ನಾನ ಮಾಡಿ ಬೆಳಗಿನಿಂದಲೆ ಕೆಲವರು ಉಪವಾಸವಿದ್ದು ಹುತ್ತವನ್ನು ಪೂಜಿಸುತ್ತಾರೆ. ಹುತ್ತಗಳಿರುವ ಕಡೆಗೆ ಹೋಗಿ ಹಾಲು, ಬಾಳೆಹಣ್ಣುಗಳನ್ನು ಹುತ್ತಕ್ಕೆ ಹಾಕುತ್ತಾರೆ. ಇದನ್ನು ತನಿ ಎರೆಯುವುದು ಎನ್ನುತ್ತಾರೆ. ಅನಂತರ ಕೋಳಿಯನ್ನು ಹುತ್ತದ ಮೇಲೆ ಕೊಯ್ದು ಅದರ ಕತ್ತನ್ನು ಹುತ್ತದ ಬಾಯಿಗೆ ಹಾಕುತ್ತಾರೆ. ತಮ್ಮ ಹರಕೆಗಳನ್ನು ಸಲ್ಲಿಸುತ್ತಾರೆ.

**ಮಕರ ಸಂಕ್ರಾಂತಿ:** ಈ ಹಬ್ಬವನ್ನು ಆಚರಿಸುವ ವೇಳೆಗೆ ಗ್ರಾಮದಲ್ಲಿ ಸ್ವಲ್ಪಮಟ್ಟಿಗೆ ಬೆಳೆಗಳು ಕೊಯ್ಲಿಗೆ ಬಂದಿರುತ್ತವೆ. ಭತ್ತ ಮತ್ತು ಕಬ್ಬು ಈ ವೇಳೆಯಲ್ಲಿ ಬೆಳೆಯುವ ಬೆಳೆಗಳು. ಈ ಹಬ್ಬವನ್ನು ೨ ದಿನಗಳ ಕಾಲ ಆಚರಿಸಲಾಗುತ್ತದೆ. ಸಂಕ್ರಾತಿಯ ಹಿಂದಿನ ದಿನ ಗ್ರಾಮದಲ್ಲಿ ಸುಣ್ಣ ಮತ್ತು ಕೆಂಪುಮಣ್ಣುಗಳನ್ನು ಕಲೆಸಿ ತೆಂಗು-ಅಡಿಕೆ ಮರಗಳಿಗೆ ಮನೆಯ ಮುಂಭಾಗದ ಜಗುಲಿಯ ಕಂಬಗಳಿಗೆ ಮತ್ತು ತೊಂಬೆಗಳಿಗೆ ಎರಡು ಬಿಳಿಗೆರೆ ಮಧ್ಯ ಕೆಂಪುಗೆರೆಯನ್ನು ಹಾಕಲಾಗುತ್ತದೆ. ಇದನ್ನೇ ಕಟ್ಟುಗಾವಲು ಎನ್ನುತ್ತಾರೆ ಹಾಗೂ ಈ ದಿನ ದನಕರುಗಳನ್ನು ತೊಳೆದು ಅವುಗಳ ಕೊಂಬುಗಳಿಗೆ ವಿವಿಧ ವರ್ಣದ ಬಣ್ಣಗಳನ್ನು ಹಚ್ಚುತ್ತಾರೆ.

ಹಬ್ಬದ ದಿನದಂದು ಮನೆಯನ್ನು ತೊಳೆದು ಸ್ವಚ್ಛಗೊಳಿಸಿ ಹೊಸಬಟ್ಟೆಗಳನ್ನು ಧರಿಸುತ್ತಾರೆ. ಬಿಳಿಗಿರಿರಂಗನ ದಾಸರು(ಭಕ್ತರು) ಈ ದಿನ ಹೊಸ ಅರಿವೆಯನ್ನು ತಂದು ಊರ ಮುಂದಿನ ಬಾವಿಯಲ್ಲಿ ಪೂಜೆ ಮಾಡಿ ಹೊಸ ನೀರನ್ನು ತಂದು ಅನ್ನ, ಬೇಳೆಸಾರು, ಪಾಯಸಗಳನ್ನು ಮಾಡಿ ಎಡೆಹಾಕಿ ಪೂಜಿಸುತ್ತಾರೆ. ಈ ಹಬ್ಬದ ವಿಶೇಷ

ತಿಂಡಿ ಎಳ್ಳುಬೆಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯ, ಇದನ್ನು ಎಳ್ಳುಬೀರುವುದು ಎನ್ನುತ್ತಾರೆ. ಈ ಎಳ್ಳಿನ ಜೊತೆ ಬೆಲ್ಲ, ಜೀರಿಗೆ ಪೆಪ್ಪಿ, ಕೊಬ್ಬರಿ, ಕಡಲೆಬೀಜ, ಕಡಲೆಕಾಳು ಒಂದು ತುಣುಕು ಕಬ್ಬಿನ ಚೂರುಗಳನ್ನು ಬೆರೆಸಿ ತಮಗೆ ಬೇಕಾದವರ ಮನೆಗಳಿಗೆ ಹೆಣ್ಣು ಮಕ್ಕಳು ಅರಿಶಿನ ಕುಂಕುಮ ಸಮೇತ ಹೋಗಿ ಕೊಡುವುದು ವಾಡಿಕೆ. ಎಳ್ಳುಬೆಲ್ಲದ ಸವಿಯಂತೆ ನಮ್ಮ ನಿಮ್ಮ ಸಂಬಂಧ – ಸ್ನೇಹವಿರಲಿ ಎಂಬುದು ಇದರ ಆಶಯವಾಗಿದೆ. ಹಬ್ಬ ಮುಗಿದ ನಾಳೆ ಬಿಳಿಗಿರಿರಂಗನ ಬೆಟ್ಟದಲ್ಲಿ ನಡೆಯುವ ಚಿಕ್ಕ ಜಾತ್ರೆಗೆ ಗ್ರಾಮದ ಪ್ರತಿಯೊಂದು ಮನೆಯಲ್ಲೂ ಸಹ ಒಬ್ಬ ವ್ಯಕ್ತಿ ಬೆಟ್ಟಕ್ಕೆ ಹೋಗಿ ಪೂಜಿಸಿಕೊಂಡು ಬರುವುದು ಇಲ್ಲಿನ ವಾಡಿಕೆಯಾಗಿದೆ.

**ಮಹಾಶಿವರಾತ್ರಿ :** ಈ ಹಬ್ಬವನ್ನು ಗ್ರಾಮದ ಲಿಂಗಾಯಿತ, ಬ್ರಾಹ್ಮಣ ವರ್ಗದ ಸಮುದಾಯದವರು ವಿಜೃಂಭಣೆಯಿಂದ ಆಚರಿಸುತ್ತಾರೆ. ಇತರ ಬೇರೆ ಜನಾಂಗಗಳಲ್ಲಿ ಸ್ವಲ್ಪಮಟ್ಟಿನ ಆಚರಣೆ ಕಂಡುಬರುತ್ತದೆ. ಈ ದಿನ ಸಹ ಜನತೆ ಮನೆಯನ್ನು ಸ್ವಚ್ಛಗೊಳಿಸಿ ಅನ್ನ, ಬೇಳೆ ಸಾರುಗಳನ್ನು ಮಾಡಿ ಪೂಜಿಸುತ್ತಾರೆ. ಈ ದಿನ ಊರಿನ ಹಲವು ಜನತೆ ಮಲೆಮಹದೇಶ್ವರ ಬೆಟ್ಟಕ್ಕೆ ಹೋಗುವುದು ರೂಢಿಯಲ್ಲಿರುವ ಸಂಪ್ರದಾಯ. ಈ ದಿನ ಊರಿನ ಗೌರೀಶ್ವರ ದೇವಾಲಯವನ್ನು ಬಣ್ಣಬಣ್ಣದ ದೀಪಗಳಿಂದ ಅಲಂಕರಿಸಿ ಶೃಂಗರಿಸಲಾಗುತ್ತದೆ. ಎಲ್ಲಾ ಜನಾಂಗದವರು ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ. ಅಂದು ರಾತ್ರಿ ಜಾಗರಣೆಯನ್ನು ಆಚರಿಸುವ ಸಲುವಾಗಿ ದೇವಾಲಯದ ಮುಂಭಾಗದಲ್ಲಿ ಹರಿಕಥೆ ಮಾಡಿಸುವುದು, ಕಥೆ ಹೇಳಿಸುವುದು ರೂಢಿಯಲ್ಲಿದೆ. ಈ ದಿನ ಬೆಳಗಿನ ಜಾವ ಬೆಳ್ಳಿಚುಕ್ಕೆಯನ್ನು ನೋಡುವವರೆಗೆ ನಿದ್ರಿಸದೆ ಶಿವರಾತ್ರಿಯನ್ನು ಆಚರಿಸಲಾಗುತ್ತದೆ.

**ಯುಗಾದಿ:** ಯುಗಾದಿ ಹಬ್ಬ ವಿಶೇಷವಾದದ್ದು. ಜನರಿಗೆ ಈ ಹಬ್ಬದಿಂದ ಹೊಸ ವರ್ಷ ಪ್ರಾರಂಭವಾಗುತ್ತದೆ. ಈ ದಿನವು ಸಹ ಮನೆಗಳನ್ನು ತೊಳೆದು ಸ್ವಚ್ಛ-ಗೊಳಿಸುತ್ತಾರೆ. ಹಾಗೂ ದನಕರುಗಳನ್ನು ತೊಳೆದು ಅವುಗಳನ್ನು ಶೃಂಗರಿಸಿ ನೇಗಿಲು, ನೊಗ ಮುಂತಾದವುಗಳನ್ನು ಪೂಜಿಸಿ ಹೊಲಕ್ಕೆ (ಗದ್ದೆಗೆ) ಹೋಗಿ ತಮಗೆ ಆಹಾರ ನೀಡುವ ಭೂಮಿ ತಾಯಿಯನ್ನು ವಿಶೇಷವಾಗಿ ಪೂಜಿಸಿ ಏರುಕಟ್ಟಿ ಹೊಡೆಯುತ್ತಾರೆ. ಇದನ್ನು 'ಹೊನ್ನೇರು ಕಟ್ಟುವುದು' ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಮಕ್ಕಳಿಗೆ ನೆನಕ್ಕಿಯನ್ನು ಕೊಡುತ್ತಾರೆ. ಅನಂತರ ಮನೆಗೆ ಬಂದು ಬೇವು-ಬೆಲ್ಲವನ್ನು ತಿನ್ನುವುದು ವಾಡಿಕೆ. ಜೀವನದ ಏಳು-ಬೀಳುಗಳನ್ನು ಸರಿಸಮಾನವಾಗಿ ಅನುಭವಿಸುತ್ತೇನೆ ಎಂಬ ನಂಬಿಕೆಯಿಂದ ಬೇವು ಬೆಲ್ಲವನ್ನು ತಿನ್ನುತ್ತಾರೆ.

**ಮುಸ್ಲಿಂ ಹಬ್ಬಗಳು:** ಯಳಂದೂರಿನಲ್ಲಿ ಒಂದು ಮಸೀದಿ ಇದೆ. ಇಲ್ಲಿನ ಮುಸ್ಲಿಮರು ಹಲವಾರು ಹಬ್ಬಗಳನ್ನು ಆಚರಿಸುತ್ತಾರೆ. ಇವರ ಪ್ರಮುಖ ಹಬ್ಬಗಳೆಂದರೆ ರಂಜಾನ್

ಮತ್ತು ಬಕ್ರೀದ್ ಹಬ್ಬಗಳು. ರಂಜಾನ್ ತಿಂಗಳಲ್ಲಿ ಮುಸಲ್ಮಾನರು ಮುಂಜಾವಿಗೆ ಉಪವಾಸ ಪ್ರಾರಂಭಿಸಿ ಸಂಜೆಯ ನಂತರ ಊಟ ಮಾಡುತ್ತಾರೆ. ಈ ಹಬ್ಬಗಳನ್ನು ಮಸೀದಿಗೆ ಹೋಗಿ ಸಾಮೂಹಿಕ ಪ್ರಾರ್ಥನೆ ಮಾಡುತ್ತಾರೆ. ಈ ಹಬ್ಬದಲ್ಲಿ ಇವರು ಬಡಬಗ್ಗರಿಗೆ ದಾನಧರ್ಮಗಳನ್ನು ಮಾಡುವುದು ಮಹತ್ವದ್ದಾಗಿದೆ. ಇವುಗಳೇ ಅಲ್ಲದೇ ಈದ್–ಮಿಲಾದ್ ಮುಂತಾದ ಸಣ್ಣಪುಟ್ಟ ಹಬ್ಬಗಳನ್ನು ಆಚರಿಸುತ್ತಾರೆ ಹಾಗೂ ಇತ್ತೀಚೆಗೆ ನಮ್ಮ ಗ್ರಾಮ ದೇವತೆಯ ಹಬ್ಬಗಳಲ್ಲೂ ಪಾಲ್ಗೊಳ್ಳುತ್ತಾರೆ.

**ಯಳಂದೂರಿನ ನಾಡಮೇಗಲ ಮಾರಮ್ಮನ ಕೊಂಡೋತ್ಸವ**

ಪ್ರತಿಯೊಂದು ಗ್ರಾಮಕ್ಕೂ ಅವರದೇ ಆದ ಗ್ರಾಮ ದೇವತೆಗಳಿರುವುದು ಸಹಜವಾಗಿದೆ. ಅಂತೆಯೇ ಯಳಂದೂರು ಗ್ರಾಮದಲ್ಲಿ ಕಂಡುಬರುವ ಪ್ರಮುಖ ಗ್ರಾಮದೇವತೆ ನಾಡಮೇಗಲ ಮಾರಮ್ಮ ಇಲ್ಲಿನ ಗ್ರಾಮದೇವತೆಯರು ಇಬ್ಬರು. ಅವರುಗಳೆಂದರೆ ದೊಡ್ಡಮ್ಮ ತಾಯಿ ಮತ್ತು ಚಿಕ್ಕಮ್ಮ ತಾಯಿ ಇಬ್ಬರೂ ಸಹ ಅಕ್ಕತಂಗಿಯರು ಒಂದೇ ಊರಿನಲ್ಲಿ ನೆಲೆಸಿದ್ದಾರೆ. ಮೊದಲಿಗೆ ಈ ದೇವತೆಯ ಮೂಲದ ಬಗ್ಗೆ ಹೇಳುವುದಾದರೆ ಹಲವು ವರ್ಷಗಳ ಹಿಂದೆ ಇಗ್ಗಲೂರು ಎಂಬ ಸ್ಥಳದ ಗ್ರಾಮದ ದೇವತೆಯಾಗಿದ್ದ ಈಕೆಯನ್ನು ಅಲ್ಲಿನ ಜನತೆ ಪೂಜಿಸುತ್ತಿದ್ದ ದೇವಿಯ ವಿಗ್ರಹವನ್ನು ಮಾಡಿಸುವ ಸಲುವಾಗಿ ಬಿಳಿಗಿರಿರಂಗನ ಬೆಟ್ಟದ ಕಾಡಿಗೆ ಬಂದು ಮರವನ್ನು ತೆಗೆದುಕೊಂಡು ದೇವಿಯ ಚಿತ್ರವನ್ನು ಕೆತ್ತಿಸಿ ತೆಗೆದುಕೊಂಡು ಹೋಗುವಾಗ ಯಳಂದೂರಿಗೆ ಬಂದ ವೇಳೆಯಲ್ಲಿ ಕತ್ತಲೆಯಾಗಿದ್ದು ಮಳೆ ಬರುವ ಸಂಭವವಿದ್ದ ಕಾರಣ ಊರ ಹೊರಭಾಗ ನೆಲೆಸಿದರು. ಅನಂತರ ಬೆಳಗಿನ ವೇಳೆಯಲ್ಲಿ ಹಿಂದಿರುಗಲು ಹೋಗುವಾಗ ದೇವಿಯ ಚಿತ್ರವನ್ನು ಎತ್ತಲು ಹೋದಾಗ ದೇವಿಯು ಅಲ್ಲಿಯೇ ಬೇರುಬಿಟ್ಟು ನೆಲೆಸಿದಳೆಂದು ಅದನ್ನು ಎಷ್ಟು ತೆಗೆದರೂ ಬರಲಿಲ್ಲವೆಂಬ ಕಥೆಯನ್ನು ಅಲ್ಲಿನ ಜನತೆ ಹೇಳುತ್ತಾರೆ. ಹಾಗಾಗಿ ಈ ದೇವತೆ ಯಳಂದೂರು ಗ್ರಾಮದಲ್ಲಿಯೇ ನೆಲೆಸಿ ವರ್ಷಕ್ಕೊಮ್ಮೆ ಹಬ್ಬವನ್ನು ಆಚರಿಸಿಕೊಳ್ಳುತ್ತಿದ್ದಾಳೆ.

ಹಲವು ವರ್ಷಗಳ ನಂತರ ಈಕೆಯ ಕಿರಿಯ ತಂಗಿ ಅಕ್ಕನ ಆಶ್ರಯಕ್ಕೆಂದು ಬಂದು ಅನಂತರ ತಾನೇ ಈ ಗ್ರಾಮದ ಅಧಿದೇವತೆಯಾಗಿ ಉಳಿದು ತನ್ನದೇ ಆದ ಕೆಲವು ಆಚರಣೆಗಳನ್ನು ಪಡೆಯುತ್ತಿದ್ದಾಳೆ. ಹೀಗೆ ಈ ಇಬ್ಬರು ಅಕ್ಕತಂಗಿಯರು ಯಳಂದೂರು ಗ್ರಾಮದ ದೇವತೆಗಳಾಗಿ ಗ್ರಾಮದಲ್ಲಷ್ಟೇ ಅಲ್ಲದೆ ಸುತ್ತಮುತ್ತಲ ಪ್ರದೇಶಗಳಲ್ಲೂ ತಮ್ಮದೇ ಆದ ಭಕ್ತಸಮೂಹವನ್ನು ಪಡೆದಿದ್ದಾರೆ. ಮೊದಲಿಗೆ ಬಂದು ನೆಲೆಸಿದ ದೇವತೆಯನ್ನೇ 'ನಾಡ ಮೇಗಲ ಮಾರಮ್ಮನೆಂದೂ ಕರೆಯಲಾಗುತ್ತದೆ. ದೊಡ್ಡಮ್ಮ ತಾಯಿಗೆ ಯುಗಾದಿಯ ಹಬ್ಬದ ವೇಳೆಯಲ್ಲಿ ನಡೆಯುವ ಕೊಂಡೋತ್ಸವದಲ್ಲಿ ತಂಪು (ತಂಬಿಟ್ಟಿನ ಆರತಿ) ಮತ್ತು ಕುಣಿತಗಳನ್ನು ಈ ದೇವಿಗೆಂದು

ಮೀಸಲಾಗಿರಿಸಲಾಗಿದೆ. ಹಾಗೆಯೇ ಚಿಕ್ಕಮ್ಮ ತಾಯಿಗೆ ಮಡೆ, ಕೊಂಡಗಳನ್ನು ಹಾಗೂ ಮೆರವಣಿಗೆಯನ್ನು ಈ ಇಬ್ಬರೂ ದೇವಿಯರಿಗೂ ಸೇರಿಸಿ ಆಚರಿಸಲಾಗುತ್ತದೆ.

ದೊಡ್ಡಮ್ಮ ತಾಯಿಗೆ ಹಲವು ವಾಹನಗಳಿವೆ. ಕುದುರೆಯೂ ಸಹ ಈಕೆಯ ವಾಹನ. ಮರದ ಕುದುರೆಯ ಮೇಲೆ ಕೊಂಡೋತ್ಸವದ ದಿನ ಮತ್ತು ಹಬ್ಬ ಮುಗಿದ ನಾಳೆ ಈ ಇಬ್ಬರು ದೇವಿಯರ ಕೊಳಗಗಳನ್ನು (ಮುಖ ಚಿತ್ರಗಳನ್ನು) ಇಟ್ಟು ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ ಮತ್ತು ೬ ಸತ್ತಿಗೆಗಳು ೨ ಧಾಳ, ೨ ಸೂರಿಪಾಣಿಗಳು ಈಕೆಯ ವಸ್ತುಗಳು ಈ ಸತ್ತಿಗೆಗಳನ್ನು ಮಾಮೂಲು ದಿನಗಳಲ್ಲಿ ಯಾರು ಬೇಕಾದರೂ ಸಹ ಹಿಡಿದುಕೊಳ್ಳಬಹುದು. ಕೊಂಡೋತ್ಸವದ ದಿನ ಮಾತ್ರ ನೇಮಕಗೊಂಡಿರುವ ವ್ಯಕ್ತಿಗಳು ಮಾತ್ರ ಹಿಡಿಯುತ್ತಾರೆ. ಈ ಚಿಕ್ಕಮ್ಮ ತಾಯಿ ತಮ್ಮ ದೊಡ್ಡಮ್ಮ ತಾಯಿಯರನ್ನು ಒಟ್ಟಾಗಿ ನಾಡಮೇಗಲ ಮಾರಮ್ಮನವರು ಮತ್ತು ಹೊಲಗೇರಿಯಮ್ಮನವರೆಂದು ಕರೆಯಲಾಗುತ್ತದೆ.

ಚಿಕ್ಕಮ್ಮ ತಾಯಿ ಕೋಪಿಸಿಕೊಂಡಾಗ ಗ್ರಾಮದಲ್ಲಿ ಅಮ್ಮ (ಗ್ವಾರ), ಸಿಡುಬುಗಳಂತಹ ಸೋಂಕುರೋಗಗಳು ಕಾಣಿಸಿಕೊಳ್ಳುತ್ತವೆ. ಕಾಲಕಾಲಕ್ಕೆ ನಿರ್ದಿಷ್ಟ ಪೂಜೆ ಸಲ್ಲಿಸಿದಾಗ ಈ ಕಾಯಿಲೆಗಳು ಮರೆಯಾಗುತ್ತವೆ. ಈಕೆಗೆ ಬೇವಿನಸೊಪ್ಪು ಮತ್ತು ಕಣಿಗಲೆ ಹೂವುಗಳು ಅಚ್ಚುಮೆಚ್ಚು. ಪ್ರತಿ ಮಂಗಳವಾರ ಮತ್ತು ಶುಕ್ರವಾರ ಪೂಜಾರಿ (ತಂಬಡಿ)ಯು ಬಿಳಿ ಮತ್ತು ಕೆಂಪಿನ ಕಣಿಗಲೆ ಹೂವುಗಳನ್ನು ತಂದು ದೇವಿಗೆ ಚಿತ್ರಿಸುತ್ತಾರೆ. ಭಕ್ತರು ತಮ್ಮ ಕಷ್ಟ ನಿವಾರಣೆಗಾಗಿ ದೇವಿಗೆ ಪೂಜೆ ಸಲ್ಲಿಸಿ ತಮ್ಮ ಕೆಲಸ ಕೈಗೂಡುವುದಾದರೆ ಪ್ರಸಾದವನ್ನು ಬಲಗಡೆಕೊಡು ಇಲ್ಲವಾದರೆ ಎಡಗಡೆ ಕೊಡು ಎಂದು ದೇವಿಯೊಡನೆ ನೇರಮಾತಿಗೆ ಇಳಿಯುತ್ತಾರೆ. ಆಗ ದೇವಿಯು ಅವರು ಕೈಗೊಂಡ ಕಾರ್ಯ ಶುಭವಾಗುವುದಾದರೆ ಬಲಗಡೆಯಿಂದ ಒಂದು ಕಣಿಗಲೆ ಹೂವನ್ನು ಕೆಳಗಡೆ ಬೀಳಿಸುತ್ತಾಳೆ. ಇಲ್ಲವಾದರೆ ಎಷ್ಟು ಕಾಯ್ದರೂ ಸಹ ಪ್ರಸಾದ ದೊರೆಯುವುದೇ ಇಲ್ಲ.

ಇಲ್ಲಿನ ಜನತೆ ತಾವು ಕೈಗೊಂಡ ಕಾರ್ಯ ಶುಭವಾಗಲೆಂದು ಈ ದೇವಿಗೆ ಕುರಿ, ಕೋಳಿಗಳನ್ನು ಬಲಿಕೊಡುವ ವಾಡಿಕೆಯಿದೆ. ಈ ದೇವಿಯು ಬಹಳ ಕಾಲದಿಂದಲೂ ಸಹ ಒಂದೆ ಮನೆತನದ ವ್ಯಕ್ತಿಗಳ ಮೈಮೇಲೆ ಮಾತ್ರ ಬರುತ್ತಾಳೆ. ಈ ದೇವಿಗೆ ವರ್ಷಕ್ಕೊಮ್ಮೆ ನಡೆಸುವ ಕೊಂಡೋತ್ಸವ ಬಹಳ ವಿಜೃಂಭಣೆಯಿಂದ ಮತ್ತು ಹಲವು ಕಟ್ಟು ಸಂಪ್ರದಾಯಗಳಿಂದ ನಡೆಯುತ್ತದೆ.

ಯಳಂದೂರಿನ ದೇವತೆಯಾದ ನಾಡಮೇಗಲ ಮಾರಮ್ಮನ ಕೊಂಡೋತ್ಸವವು ಹಲವು ಆಚರಣೆಗಳ ಮೂಲಕ ಬಹಳ ಸಂಪ್ರದಾಯವಾಗಿ ೩ ದಿನಗಳ ಕಾಲ ನಡೆಯುತ್ತದೆ. ಈ ಗ್ರಾಮದೇವತೆಯ ಹಬ್ಬವನ್ನು ಇಲ್ಲಿನ ದಲಿತರು ಮಾತ್ರ ಬಹಳ

ವಿಜೃಂಭಣೆಯಿಂದ ಆಚರಿಸುತ್ತಾರೆ. ಉಳಿದ ವರ್ಗ ಯುಗಾದಿಯ ಹಬ್ಬವನ್ನು ಮಾತ್ರ ಆಚರಿಸುತ್ತಾರೆ. ಹಬ್ಬದ ಮೊದಲ ದಿನ ಎಂದರೆ ಯುಗಾದಿ ಹಬ್ಬದ ಹಿಂದಿನ ದಿನ ತಂಪು ಮಡೆ ಎಂಬ ಆಚರಣೆ ಕಂಡುಬರುತ್ತದೆ. ಇದು ಈ ದೇವತೆಗೆ ಪ್ರಿಯವಾದದ್ದೆ ಆಗಿದೆ. ನಾಡಮೇಗಲ ಮಾರಮ್ಮ ಎಂಬುವವರು ಇಬ್ಬರು ಅಕ್ಕತಂಗಿಯರು ಮೊದಲನೆಯವಳು ದೊಡ್ಡಮ್ಮ ತಾಯಿ ಈಕೆಗೆ ಪ್ರಿಯವಾದದ್ದು ತಂಪು, ಚಿಕ್ಕಮ್ಮ ತಾಯಿಗೆ ಪ್ರಿಯವಾದದ್ದು ಮಡೆ. ಈ ದಿನ ದಲಿತಕೇರಿಯ ಪ್ರತಿಯೊಂದು ಮನೆಯವರೂ ಸಹ ಸುಣ್ಣ-ಬಣ್ಣಗಳನ್ನು ಮನೆಗಳಿಗೆ ಹೊಡೆದು ಸ್ವಚ್ಛಗೊಳಿಸುತ್ತಾರೆ. ಸಂಜೆಯ ವೇಳೆ ಎಲ್ಲರೂ ಸ್ನಾನ ಮಾಡಿ ಹೊಸಮಡಿಕೆಯನ್ನು ತಂದು ಜೊತೆಗೆ ಬೆಲ್ಲ, ಅಕ್ಕಿ, ಸೌದೆಗಳನ್ನು ತೆಗೆದುಕೊಂಡು ಎಲ್ಲರೂ ಒಟ್ಟಾಗಿ ಹೋಗಿ ದೇವಾಲಯದ ಮುಂಭಾಗದಲ್ಲಿ ಹಳ್ಳಗಳನ್ನೂ ಕಿತ್ತು ಮಡೆ ಅನ್ನವನ್ನು ಮಾಡುತ್ತಾರೆ. ಊರಿನ ಪುರುಷರು ಮಡೆಯನ್ನು ಮಾಡಲು ಹೊರಟ ನಂತರವೇ ಮನೆಗಳಲ್ಲಿ ಅಡಿಗೆ ಮಾಡಲು ಪ್ರಾರಂಭಿಸುವುದು. ಮೊದಲಿಗೆ ಹೊಸ ಮಡಿಕೆಯಲ್ಲಿ ಬೆಲ್ಲ ಏಲಕ್ಕಿ ಕಾಯಿ ನೀರನ್ನು ಹಾಕಿ ಪಾಕವನ್ನು ಬರಿಸಿ ಅದಕ್ಕೆ ಅಕ್ಕಿ ಹಿಟ್ಟನ್ನು ಹಾಕಿ ಕಲೆಸುತ್ತಾರೆ. ಹೀಗೆ ತಯಾರಿಸಿದ ತಂಬಿಟ್ಟಿಗೆ ಹಲವು ಹೂವಿನ ಅಲಂಕಾರಗಳನ್ನು ಮಾಡಿ ಬಂದು ತಟ್ಟೆಯಲ್ಲಿ ಬಾಳೆ ಎಲೆಯ ಮೇಲೆ ಇಟ್ಟು ರಾತ್ರಿ ಸುಮಾರು ಹತ್ತು ಘಂಟೆಯ ವೇಳೆಗೆ ಊರಿನ ಹೆಣ್ಣು ಮಕ್ಕಳೆಲ್ಲರೂ ಶೃಂಗರಿಸಿಕೊಂಡು ದೇವಾಲಯದ (ಮಾರಿಗುಡಿ) ಬಳಿಗೆ ವಾದ್ಯದ ಸಮೇತ ಆಗಮಿಸುತ್ತಾರೆ.

ಆ ನಂತರ ಯುವಕರು ಸುಮಾರು ಮಧ್ಯರಾತ್ರಿ ೧ ಗಂಟೆಯವರೆಗೂ ಹಲವು ಬಗೆಯ ಕುಣಿತಗಳನ್ನು ಕುಣಿಯುತ್ತಾರೆ. ಈ ಕುಣಿತವೂ ಸಹ ಈ ದೇವಿಯ ಪ್ರಮುಖ ಕುಣಿತಗಳೆಂದು ಹೇಳುತ್ತಾರೆ. ಆನಂತರ ೧ ಗಂಟೆಯ ವೇಳೆಗೆ ದೇವಿಯು ಪೂಜಾರಿಯ ಮೈ ಮೇಲೆ ಬಂದು ಒಲೆಯ ಮೇಲೆ ಇಟ್ಟಿರುವ ಮಡೆ ಅನ್ನವನ್ನು ತಮ್ಮ ಕೈಯಿಂದ ಎತ್ತಲು ಪ್ರಾರಂಭಿಸಿದಾಗ ಅದನ್ನು ಒಂದು ಕುಕ್ಕೇ (ಪುಟ್ಟಿ)ಯಲ್ಲಿ ಹಾಕಿಸಿಕೊಂಡು ದೇವರ ಜೊತೆಯಲ್ಲಿ ನೇಮಕಗೊಂಡಿರುವಾತ ಓಡುತ್ತಾನೆ. ಎಲ್ಲಾ ಮಡಕೆಗಳ ಅನ್ನವನ್ನು ತೆಗೆದ ನಂತರ ಮರಿಗಳನ್ನು ಕುಯ್ದು ರಕ್ತವನ್ನು ಆ ಅನ್ನದೊಡನೆ ಬೆರೆಸಿ ಆಕಾಶದ ಕಡೆಗೆ ಎರಚುತ್ತಾರೆ. ಇದನ್ನು ರಸಮುದ್ರೆ ಇಡುವುದು ಎನ್ನುತ್ತಾರೆ. ದೇವಸ್ಥಾನದ ಸುತ್ತ ಭತ್ತ ಹಿಡಿದು ಓಡುತ್ತಾರೆ. ಜೊತೆಗೆ ಇಬ್ಬರು ವ್ಯಕ್ತಿಗಳು ಅದನ್ನು ಮೇಲೆ ಎಸೆಯುತ್ತಾ ಹೋಗುತ್ತಾರೆ. ಇದನ್ನು ಹಿಂದೆ ನೋಡಬಾರದೆಂದು ಹೇಳಲಾಗುತ್ತಿತ್ತು. ಆದರೆ ಇಂದು ಇದು ಸರ್ವೇಸಾಮಾನ್ಯವಾದ ನೋಟವಾಗಿದೆ. ಇವೆಲ್ಲ ಮುಗಿದ ನಂತರ ಭಕ್ತರು ತೆಗೆದುಕೊಂಡು ಹೋದ ತಂಬಿಟ್ಟಿನ

ಆರತಿಯನ್ನು ಪೂಜಿಸಿ ತೀರ್ಥವನ್ನು ನೀಡುತ್ತಾರೆ. ಅನಂತರ ಸಮಸ್ತರು ಮೆರವಣಿಗೆಯ ಮೂಲಕ ತಮ್ಮ ಮನೆಗಳಿಗೆ ಹಿಂತಿರುಗುತ್ತಾರೆ.

ಅನಂತರ ಯುಗಾದಿ ಹಬ್ಬದ ದಿನ ತಂಪಿನ ದಿನ ಕತ್ತರಿಸಿದ ಮರಿಯ ಮಾಂಸವನ್ನು ಕೇರಿಯ ಪ್ರತಿಯೊಂದು ಮನೆಗೂ ಸಾಮಾನ್ಯವಾಗಿ ಹಂಚಿ ಒಂದೆಡೆಯಿಂದ ಹೆಸರುಗಳನ್ನು ಕೂಗುವುದರ ಮೂಲಕ (ಕುಳ ಕೂಗುವುದು) ಹಂಚುತ್ತಾರೆ. ಜನತೆ ಇದನ್ನೇ ಅಡಿಗೆ ಮಾಡಿ ದೇವಿಗೆ ಈ ದಿನ ಎಡೆ ಹಾಕುತ್ತಾರೆ. ಯುಗಾದಿಯ ರಾತ್ರಿ ಸುಮಾರು ಹತ್ತು ಘಂಟೆಯ ನಂತರ ಊರಿನ ಪ್ರತಿಯೊಬ್ಬರೂ ಸಹ ಮಾರಿಗುಡಿಯ ಮುಂದೆ ಅಂದರೆ ಕೊಂಡದ ಸೌದೆಯ ಮುಂದೆ ಕುಣಿಯುತ್ತಾರೆ. ಮಧ್ಯ ರಾತ್ರಿಯ ವೇಳೆಗೆ ಮಾರಮ್ಮ ಬಂದು ಕೊಂಡದ ಸೌದೆಗೆ ಬೆಂಕಿ ಇಡುವ ತನಕವೂ ಸಹ ಈ ಕುಣಿತಗಳು ನಡೆಯುತ್ತಲೇ ಇರುತ್ತವೆ. ಸುಮಾರು ಒಂದೂವರೆ ಎರಡು ಗಂಟೆಯ ವೇಳೆಗೆ ಮಾರಮ್ಮ ಪೂಜಾರಿಯ ಮೇಲೆ ಬಂದು ಕೊಂಡದ ಸೌದೆಗೆ ಬೆಂಕಿಯಿಡುವ ಕಾರ್ಯಕ್ರಮವಿರುತ್ತದೆ. ಈ ವೇಳೆಯಲ್ಲಿ ದೇವಿಯೊಡನೆ ಆಕೆಯ ವಸ್ತುಗಳಾದ ಸತ್ತಿಗೆಗಳು, ಶೂರಿಪಾಣಿಗಳನ್ನು ಯುವಕರು ಹಿಡಿದು ಕೊಂಡದ ಸುತ್ತ ದೇವಿಯೊಡನೆ ಮೂರು ಬಾರಿ ಸುತ್ತುತ್ತಾರೆ. ಕೊನೆಯ ಸುತ್ತಿನಲ್ಲಿ ದೇವಿಯು ಆ ಸೌದೆಯ ಗುಡ್ಡೆಗೆ ಬೆಂಕಿಯನ್ನಿಟ್ಟು ದೇವಸ್ಥಾನದ ಒಳಗಡೆ ಹೋಗುತ್ತಾಳೆ. ಅನಂತರ ಯಾರು ಸಹ ಅಲ್ಲಿ ಇರಬಾರರೆಂದು ಮಾತಿದೆ. ಈ ಕಾರಣ ಯಾರೂ ಸಹ ಇರುವುದಿಲ್ಲ. ದೇವಿಯ ಸಮಸ್ತ ವಸ್ತುಗಳೊಡನೆ ಎಲ್ಲರೂ ಸಹ ಹಿಂದಿರುಗುತ್ತಾರೆ.

ಯುಗಾದಿ ಹಬ್ಬದ ನಂತರದ ದಿನ ಊರಿನ ಪುರುಷರೆಲ್ಲರೂ ಹೋಗಿ ಆ ಕೊಂಡದ ಬೆಂಕಿಯಲ್ಲಿರುವ ದಪ್ಪ ದಪ್ಪ ಸೌದೆಗಳನ್ನು ಎತ್ತಿಹಾಕಿ ಹದಮಾಡುತ್ತಾರೆ. ಮಧ್ಯಾಹ್ನ ಸುಮಾರು ಮೂರು ಗಂಟೆಯ ವೇಳೆಗೆ ವಾದ್ಯಗಳು ಮತ್ತು ದೇವಿಯ ವಾಹನಗಳ ಸಮೇತ ಊರಿನ ಪ್ರಮುಖರು ಕೆರೆಗೆ ಹೋಗಿ ದೇವರ ಕೊಳಗವನ್ನು ತೊಳೆದು ಹೂವುಗಳಿಂದ ಅಲಂಕರಿಸುತ್ತಾರೆ. ಜೊತೆಗೆ ಸತ್ತಿಗೆಗಳನ್ನು ತೊಳೆದು ಸಿಂಗರಿಸುತ್ತಾರೆ. ಈ ದಿನದ ವಿಶೇಷವೆಂದರೆ ಇರುವ ೯ ಸತ್ತಿಗೆಗಳು ದೇವಿಯ ಅಕ್ಕ-ತಂಗಿಯರದೆಂದು ಹೇಳುತ್ತಾರೆ. ಹಾಗೂ ಹಿಂದಿನಿಂದಲೂ ನಿರ್ದಿಷ್ಟವಾಗಿ ನಿಯಮಿತವಾಗಿರುವವರು ಮಾತ್ರ ಈ ದಿನ ಉಪವಾಸವಿದ್ದು ಬಹಳ ಭಕ್ತಿಯಿಂದ ಇವುಗಳನ್ನು ಹಿಡಿಯುತ್ತಾರೆ. ಈ ಸತ್ತಿಗೆಗಳಲ್ಲಿ ಬೆಟ್ಟಳ್ಳಿ ಅಮ್ಮನದು ಪ್ರಮುಖ ಸತ್ತಿಗೆಯಾಗಿದೆ. ಈ ವೇಳೆಯಲ್ಲಿ ಇವರಿಗೂ ಸಹ ಆ ಸತ್ತಿಗೆಗೆ ಸಂಬಂಧಿಸಿದ ದೇವತೆಗಳು ಮೈಮೇಲೆ ಬರುತ್ತವೆ. ಇನ್ನೇನೋ ಕೆಲವೇ ದೂರದಲ್ಲಿ ಇದೆ ಎನ್ನುವ ವೇಳೆಗೆ ಕೊಂಡದ ಸುತ್ತ ೪ ದಿಕ್ಕುಗಳಲ್ಲಿ ಒಬ್ಬ ವ್ಯಕ್ತಿ ಪೂಜಿಸಲು ತೊಡಗುತ್ತಾನೆ. ಈತನೂ ಸಹ ಬಹಳ ಸಂಪ್ರದಾಯವಂತನಾಗಿರಬೇಕು. ಕೊಂಡದ ೪ ಮೂಲೆಗಳಲ್ಲೂ

ಹಾಲು ತೀರ್ಥಗಳನ್ನು ಹಾಕಿ ಕೆಂಡ ಮೇಲೆ ಕಣಿಗಲೇ ಹೂವನ್ನು ಹಾಕುತ್ತಾರೆ. ಈ ಹೂವು ದೇವಿಯು ಬಂದು ಕೊಂಡವನ್ನು ತುಳಿಯುವ ತನಕವೂ ಸಹ ಬಾಡುವುದಿಲ್ಲ.

ದೇವಸ್ಥಾನದ ಮುಂಭಾಗದ ಸ್ವಲ್ಪದೂರದಲ್ಲಿ ಒಂದು ಹುಣಸೇ ಮರವಿದೆ. ಅಲ್ಲಿಗೆ ಪೂಜಾರಿ ಬರುವ ತನಕವೂ ಸಹ ದೇವಿ ಮೈಮೇಲೆ ಬರುವುದಿಲ್ಲ. ಇನ್ನೇನು ಕೊಂಡ ಕೆಲವೇ ದೂರದಲ್ಲಿದೆ ಎನ್ನುವ ವೇಳೆಗೆ ಪೂಜಾರಿಯ ಮೈಮೇಲೆ ಬಂದು ಕೊಂಡವನ್ನು ತುಳಿಯುತ್ತಾರೆ. ಕೊಂಡವನ್ನು ಹಾಯ್ದ ನಂತರ ಕೊನೆಯ ಹೆಜ್ಜೆ ಇಡುವಾಗ ತಿರುಗಿ ನೋಡುವುದು ದೇವಿಯು ರೂಢಿಸಿಕೊಂಡು ಬಂದಿರುವ ಘಟನೆ ಒಮ್ಮೊಮ್ಮೆ ಎರಡು – ಮೂರು ಬಾರಿ ಸಹ ತಿರುಗಿ ನೋಡುತ್ತಾರೆ. ಕಾರಣ ತಾನು ಕೊಂಡವನ್ನು ಹಾಯ್ದ ನಂತರ ಬೇರೆ ಯಾರೂ ಸಹ ಹಾಯಬಾರದು ಎಂದು ಉದ್ದೇಶಪೂರ್ವಕವಾಗಿ ಯಾರಾದರೂ ಬರಲು ಯತ್ನಿಸಿದರೆ ಅವರಿಗೆ ಕೆಟ್ಟದಾಗುತ್ತದೆ ಎಂದು ಇಲ್ಲಿನ ಜನತೆ ಹೇಳುತ್ತಾರೆ. ಈ ಸಂದರ್ಭದಲ್ಲಿ ಹಲವು ಮಹಿಳೆಯರು ತಮ್ಮ ಕಷ್ಟ ನಿವಾರಣೆಗಾಗಿ ಪಂಜಿನ ಸೇವೆಯನ್ನು ಮಾಡುತ್ತಾರೆ.

ಕೊಂಡವಾದ ನಂತರ ಬೀದಿಯ ಬಳಿಗೆ ನಡೆದು ಬರುವಾಗ ಅಲ್ಲಿನ ಮಹಿಳೆಯರು ತಮಗೆ ಒಳ್ಳೆಯದಾಗಲಿ, ಮಕ್ಕಳಾಗಲಿ ಎಂಬ ಕಾರಣಕ್ಕೆ ಅಡ್ಡ ಮಲಗುತ್ತಾರೆ. ಆ ಸಂದರ್ಭದಲ್ಲಿ ದೇವಿ ಒಬ್ಬೊಬ್ಬ ಭಕ್ತರನ್ನು ದಾಟಿ ಸಾಗುತ್ತಾರೆ.

ಮತ್ತೆ ರಾತ್ರಿ ೯.೧೦ ವೇಳೆಗೆ ಕೇರಿಯ ಜನತೆಯೆಲ್ಲರೂ ಸೇರಿ ದೇವಿಯ ವಾಹನ ಮತ್ತು ಸತ್ತಿಗೆಗಳನ್ನು ತೆಗೆದುಕೊಂಡು ಊರಿನ ಪ್ರತಿಯೊಂದು ಬೀದಿಯನ್ನು ಸುತ್ತಿ ಭಕ್ತರಿಂದ ಪೂಜೆಗಳನ್ನು ಸ್ವೀಕರಿಸಿ ಬೆಳಗಿನ ವೇಳೆಗೆ ದೇವಿಯ ಇಷ್ಟ ಸ್ಥಳವಾದ ದಲಿತ ಬೀದಿಗೆ ಬರುತ್ತಾರೆ. ಈ ವೇಳೆಯಲ್ಲಿ ಪೂಜಾರಿ ವಾಹನದಿಂದ ಕೆಳಗಿಳಿದು ಬರುತ್ತಾರೆ. ಈ ವೇಳೆಯಲ್ಲಿ ಭಕ್ತರು ಹೂವನ್ನು ತಂದು ವಾಹನದ ಮೇಲೆ ಮತ್ತು ಪೂಜಾರಿಯ ಮೈಮೇಲೆ ಹಾಕುತ್ತಾರೆ. ಬೀದಿಯ ಬಳಿಗೆ ಬಂದಕ್ಷಣವೇ ದೇವಿ ಮೈಮೇಲೆ ಬಂದು ಕುಣಿಯುತ್ತಾರೆ. ಈ ವೇಳೆಯಲ್ಲಿ ಬೆಳಗಿನ ವೇಳೆಯಲ್ಲಿ ಹೆಣ್ಣುಮಕ್ಕಳು ವಿವಿಧ ರೀತಿಯ ರಂಗೋಲಿಗಳನ್ನು ಬಿಡಿಸಿ ಬೀದಿಯನ್ನು ಶೃಂಗರಿಸುತ್ತಾರೆ. ಈ ವೇಳೆಯಲ್ಲಿ ದೇವಿಯ ವಾಹನಕ್ಕೆ ಚಿಲ್ಲರೆ ಕಾಸುಗಳನ್ನು ಎಸೆಯುವುದು, ಕೋಳಿ ಮರಿಯನ್ನು ಎಸೆಯುವುದು ಅದನ್ನು ಗಂಡು ಮಕ್ಕಳು ಆಯ್ದುಕೊಳ್ಳುವುದು ಇಲ್ಲಿನ ರೂಢಿ ಸಂಪ್ರದಾಯ. ಅನಂತರ ಬೀದಿಯ ಕೊನೆಯ ಕೇರಿಯವರೆಗೆ ದೇವಿಗೆ ಒಂದು ಕೋಳಿಯನ್ನು ಕೊಡಬೇಕು ಇದನ್ನು ದೇವಿ ಬಾಯಿಂದ ಕಚ್ಚಿ ರಕ್ತವನ್ನು ಕುಡಿದು ಎಸೆಯುತ್ತಾರೆ. ನಂತರ ದೇವಿಯ ವಾಹನವನ್ನು ಕೆಳಗಿಳಿಸಿ ಎಲ್ಲರೂ ಸಹ ಸುಮಾರು ೧೦ ಗಂಟೆಯ ವೇಳೆಗೆ ಪುರುಷರೆಲ್ಲರೂ ದೇವಿಯ ಮನವೊಲಿಕೆಗಾಗಿ ಮತ್ತು ತಮ್ಮ ಖುಷಿಗಾಗಿ ವಿವಿಧ ರೀತಿಯ ಕುಣಿತಗಳನ್ನು ಕುಣಿಯುತ್ತಾರೆ. ಕುಣಿತವನ್ನು ನೋಡುತ್ತಿದ್ದರೆ, ಒಂದು ರೀತಿಯ ರೋಮಾಂಚನ–

ವಾಗುತ್ತದೆ. ಡೋಲಿನ ಸದ್ದಿಗೆ (ತಾಳಕ್ಕೆ ತಕ್ಕಂತೆ) ಹೆಜ್ಜೆಗಳನ್ನು ಹಾಕುತ್ತಾ ಕುಣಿಯುತ್ತಾರೆ. ಕುಣಿದು ಸುಸ್ತಾದ ನಂತರ ಭಾವ–ಭಾಮೈದ, ಅತ್ತಿಗೆ–ನಾದಿನಿಯರು, ಗೆಳೆಯರೆಲ್ಲರೂ ಸೇರಿ ನೀರನ್ನು ಎರಚುತ್ತ ಸಂತೋಷಪಡುತ್ತಾರೆ. ಹೀಗೆ ನಾಡಮೇಗಲ ಮಾರಮ್ಮನ ಕೊಂಡೋತ್ಸವವು ಮುಗಿಯುತ್ತದೆ. ಹೀಗೆ ಹಬ್ಬ ಮುಗಿದ ಒಂದು ವಾರದ ತನಕವು ದೇವಿ ಪೂಜಾರಿಯ ಮೈಮೇಲೆ ಬರುವುದಿಲ್ಲ. ಈ ರೀತಿ ವರ್ಷಕ್ಕೊಮ್ಮೆ ತಾಯಿಯ ಕೊಂಡೋತ್ಸವವು ಬಹಳ ವಿಜೃಂಭಣೆಯಿಂದ ಸುಮಾರು ೪ ದಿನಗಳ ಕಾಲ ನಡೆಯುತ್ತದೆ. ಈ ಹಬ್ಬವನ್ನು ಸಾಲವಾದರೂ ಮಾಡಿ ಆಚರಿಸುವ ಮೂಲಕ ತಾವು ವರ್ಷವಿಡೀ ದುಡಿದು ಸುಸ್ತಾದ ಜನತೆಗೆ ಈ ಹಬ್ಬವು ಸಂತೋಷವನ್ನು ನೀಡುತ್ತದೆ.

ಕೇವಲ ಇವಿಷ್ಟೇ ಅಲ್ಲದೆ ಮಾರಮ್ಮನಿಗೆ ಕುರಿ–ಕೋಳಿಗಳನ್ನು ಬಿಟ್ಟು ಹರಕೆ ಒಪ್ಪಿಸುವುದು, ಕಾರ್ತಿಕ ಮಾಸದಲ್ಲಿ ದೇವಾಲಯದ ಸುತ್ತ ದೀಪಗಳನ್ನು ಬೆಳಗಿಸುವುದು ಹಾಗೂ ದೇವಿಗೆ ಸೀರೆ, ಮೂಗುತಿ, ತಾಳಿ, ಸತ್ತಿಗೆಗಳನ್ನು ಮಾಡಿಸಿ ಕೊಡುವುದು ಇಲ್ಲಿ ರೂಢಿಯಲ್ಲಿರುವ ನಂಬಿಕೆಗಳು.

**ಗಾಣಿಗರ ನಂಬಿಕೆ ಮತ್ತು ಹಬ್ಬಗಳ ಪರಿಚಯ:**

ಗಾಣಿಗರ ವೃತ್ತಿ ಏನೆಂದರೆ ಗಾಣ ಆಡಿಸುವುದೇ ಆಗಿದೆ. ಇವರನ್ನು ಕೆಲವರು ಶಿವಜ್ಯೋತಿ ಪಣ ಎಂದು ಕೆಲವರು ಕರೆಯುತ್ತಾರೆ.

ಯಳಂದೂರಿನಲ್ಲಿ ಸುಮಾರು ೫೦ ಕುಟುಂಬಗಳಿವೆ. ಇವರಲ್ಲಿ

೧. ಹೆಗ್ಗಾಣಿಗರು

೨. ಕಿರುಗಾಣಿಗರು

ಇವರಿಬ್ಬರಲ್ಲಿ ವೈವಾಹಿಕ ಸಂಬಂಧವಿರುವುದಿಲ್ಲ. ಈ ಊರಿನ ಗಾಣಿಗರು ವಿಶೇಷವಾಗಿ ಶಿವರಾತ್ರಿ ಮತ್ತು ಗೌರಿ ಹಬ್ಬವನ್ನು ಆಚರಿಸುತ್ತಾರೆ. ಈ ದಿನಗಳಲ್ಲಿ ಹೊಳೆಯ ಹತ್ತಿರ ಹೋಗಿ ಪೂಜೆ ಮಾಡಿಕೊಂಡು ಪಂಚಾಮೃತ ಮಾಡಿ ಹಂಚಿ ನಂತರ ಮನೆಗೆ ಬಂದು ಪೂಜೆಯನ್ನು ಮಾಡುತ್ತಾರೆ.

**ಗಾಣಿಗರ ಮೂಢನಂಬಿಕೆ:**

ಒಳ್ಳೆಯ ಕೆಲಸಕ್ಕೆ ಹೋಗುವಾಗ ಬೆಕ್ಕು ಅಡ್ಡಬರಬಾರದು. ಒಂದು ವೇಳೆ ಬಂದರೆ ಸ್ವಲ್ಪ ಹೊತ್ತು ನಿಂತು ಹೋಗಬೇಕು.

ಅಮಾವಾಸ್ಯೆಯ ದಿನ ಗರ್ಭಿಣಿಯರು, ಬಾಣಂತಿಯರು ಸತ್ತರೆ ಆ ಸತ್ತ ಶವವನ್ನು ಹೂಲದ ನಂತರ ಮಾಟ ಮಂತ್ರದವರಿಂದ ರಕ್ಷಿಸಲು ರಾತ್ರಿಯೆಲ್ಲಾ ಕಾಯುವರು.

**ಗಾಣಿಗರ ಆಚರಣೆ:**

ಮದುವೆಯ ಸಂದರ್ಭದಲ್ಲಿ ಮುತ್ತೈದೆಯರೇ ಶಾಸ್ತ್ರ ಮಾಡಬೇಕು. ಅದರಲ್ಲೂ ಐದು ಅಥವಾ ಒಂಬತ್ತು ಮುತ್ತೈದೆಯರು ಶಾಸ್ತ್ರಮಾಡಬೇಕು.

ಗಾಣಿಗರಲ್ಲಿ ಅಂತರಜಾತೀಯ ವಿವಾಹಕ್ಕೆ ಮಾನ್ಯತೆಯಿಲ್ಲ. ಪುಟ್ಟಮಕ್ಕಳು ಸತ್ತರೆ ಹುತ್ತಕ್ಕೆ ಆ ಮಗುವನ್ನು ಹಾಕುತ್ತಾರೆ. ಮಹಾಲಯ ಅಮಾವಾಸ್ಯೆಗೆ ಸತ್ತುಗೆಟ್ಟವರನ್ನು ನೆನೆದು ಎಡೆ ಹಾಕುವರು.

ಶ್ರಾವಣಮಾಸದಲ್ಲಿ ಮೂರನೇ ಅಥವಾ ಕಡೆಯ ಶನಿವಾರದಂದು ಈ ಜನಾಂಗದವರು ದಾಸಯ್ಯನವರನ್ನು ಕರೆಸಿ ಎಡೆಹಾಕಿ ಪೂಜೆ ಮಾಡಿಸುತ್ತಾರೆ. ಇಂತಹ ದಿನಗಳಲ್ಲಿ ಈ ರೀತಿಯ ಪೂಜೆ ಮಾಡಿಸಿದರೆ ಮುಂದಿನ ದಿನಗಳಲ್ಲಿ ಜೀವನ ಉತ್ತಮವಾಗಿರುತ್ತದೆ ಎಂಬ ನಂಬಿಕೆಯಿದೆ.

**ಬ್ರಾಹ್ಮಣರ ಹಬ್ಬಗಳ ಪರಿಚಯ:**

ಅನಂತ ಪದ್ಮನಾಭವ್ರತವನ್ನು ೧೪ ವರ್ಷ ಗಂಡ-ಹೆಂಡತಿಯ ಜೋಡಿ ಪೂಜಿಸಿ ನಂತರ ೧೪ನೇ ವರ್ಷಕ್ಕೆ ೧೪ ಮುತ್ತೈದೆ ಜೋಡಿಯರನ್ನು ಕರೆದು ೧೪ ಕಳಸವನ್ನು ಇಟ್ಟು ಪೂಜಿಸಿ ನಂತರ ೧೪ ಎಳೆಯ ಕೆಂಪುದಾರವನ್ನು ಆ ಮುತ್ತೈದೆ ಜೋಡಿಗಳಿಗೆ ನೀಡಿ ತಾವು ಸಹ ಮುಕ್ಕೋಟಿ ದೇವರನ್ನು ನೆನೆದು ಕೈಗೆ ಕಟ್ಟಿಕೊಳ್ಳುತ್ತಾರೆ. ಇಂತಹ ದಾರ ದೊರೆತರೆ ಬಹಳ ಪುಣ್ಯ ಎಂಬ ನಂಬಿಕೆಯಿದೆ.

ಹೀಗೆ ಹಿಂದಿನ ವರ್ಷ ಬೇರೆ ದಂಪತಿಗಳು ವ್ರತ ಮಾಡಿ ಕಟ್ಟಿದ ಕೆಂಪು ದಾರವಿದ್ದರೆ ಅದನ್ನು ಹೊಳೆಗೆ ಬಿಡಬೇಕು. ಈ ಹಳೆಯದಾರ ಇನ್ನೊಬ್ಬರಿಗೆ ಸಿಕ್ಕರೆ ಅದೂ ಸಹ ಪುಣ್ಯವೇ. ಒಟ್ಟಿನಲ್ಲಿ ಅನಂತ ಪದ್ಮನಾಭ ವ್ರತದಲ್ಲಿ ಕೆಂಪು ಎಳೆಗೆ ಹೆಚ್ಚಿನ ಪ್ರಾಮುಖ್ಯತೆ ಇದೆ.

**ಭೀಮನ ಅಮವಾಸ್ಯೆ:** ಹಿಂದೆ ಸತಿಸಾವಿತ್ರಿ ಸತ್ತ ಗಂಡನನ್ನು ಯಮನಿಂದ ಮತ್ತೆ ಪಡೆದು ತನ್ನ ಮುತ್ತೈದೆತನವನ್ನು ಉಳಿಸಿಕೊಂಡಳು ಎಂಬ ನಂಬಿಕೆಯಿಂದ ಬ್ರಾಹ್ಮಣರು ಹಿಂದೆ ತಮ್ಮ ಗಂಡನಿಗೆ ಪಾದ ಪೂಜೆ ಮಾಡಿ ತನ್ನ ಮುತ್ತೈದೆ ತನವನ್ನು ಗಟ್ಟಿ ಮಾಡು ಎಂದು ದೇವರಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದರು. ಈ ದಿನಗಳಲ್ಲಿ ಎಲ್ಲಾ ವರ್ಗದವರು ತಮ್ಮ ಮುತ್ತೈದೆತನವನ್ನು ಉಳಿಸಿಕೊಳ್ಳಲು ಈ ಭೀಮನ ಅಮವಾಸ್ಯೆ ದಿನವನ್ನು ಆಚರಿಸುತ್ತಾರೆ.

**ವರಮಹಾಲಕ್ಷ್ಮಿ ಹಬ್ಬ:** ೧೮ ಶುಕ್ರವಾರ ಲಕ್ಷ್ಮಿಯನ್ನು ಪೂಜಿಸಿ, ೧೮ನೇ ಶುಕ್ರವಾರ ೧೮ ಮುತ್ತೈದೆಯನರನ್ನು ಕರೆದು ಹಣ್ಣು, ಕಾಯಿ, ದವಸ-ಧಾನ್ಯಗಳನ್ನು ಕೊಟ್ಟು ಪೂಜಿಸುತ್ತಿದ್ದ ದಿನವೇ ವರಮಹಾಲಕ್ಷ್ಮಿ ಹಬ್ಬವಾಗಿದೆ. ಇಲ್ಲಿಯ ಬ್ರಾಹ್ಮಣರು

ವಿಜೃಂಭಣೆಯಿಂದ ಹಿಂದಿನಿಂದಲೂ ಆಚರಿಸುತ್ತಾ ಬಂದಿದ್ದಾರೆ. ದೇವರು ಇಟ್ಟ ಬಲೆಗೆ ೫ ಪುಟ್ಟ ಪುಟ್ಟ ಬಾಳೆಗೊನೆಯನ್ನು ಕಟ್ಟುತ್ತಾರೆ. ಈ ದೇವಿಗೆ ಗೋದಿ ಪಾಯಸ ಅಥವಾ ಸಜ್ಜಿಗೆಯನ್ನು ನೈವೇದ್ಯಗೆ ಬಳಸುತ್ತಾರೆ. ಗೋಧೂಳಿಯ ಸಮಯದಲ್ಲಿ ಲಕ್ಷ್ಮಿಯನ್ನು ಪೂಜಿಸಿದರೆ ಒಳ್ಳೆಯದು ಎಂಬ ನಂಬಿಕೆಯಿತ್ತು. ಅದರಂತೆ ಹೀಗಲೂ ಅದೇ ನಂಬಿಕೆಯಿಂದ ಎಲ್ಲಾ ವರ್ಗದವರ ಕೆಲವು ಕುಟುಂಬದವರು ಪೂಜಿಸುತ್ತಿದ್ದಾರೆ.

**ರಾಮನವಮಿ:** ಈ ಹಬ್ಬವನ್ನು ಬ್ರಾಹ್ಮಣರು ಹಿಂದೆ ತಮ್ಮ ಜನಾಂಗದವರೇ ಕೂಡಿ ಮಾಡುತ್ತಿದ್ದರು. ಶ್ರೀರಾಮನನ್ನು ನೆನೆದು ಪೂಜಿಸಿ ನಂತರ ನೀರು ಮಜ್ಜಿಗೆ, ಪಾನಕ, ಕೋಸಂಬರಿಯನ್ನು ನೈವೇದ್ಯಗೆ ಇಟ್ಟು ಪೂಜಿಸಿ ಎಲ್ಲಾ ವರ್ಗದವರಿಗೂ ಹಂಚುತ್ತಿದ್ದರು. ಆದರೆ ಈಗ ಎಲ್ಲಾ ವರ್ಗದ ಪ್ರತಿಕುಟುಂಬದ ಒಬ್ಬ ವ್ಯಕ್ತಿಯಾದರೂ ದೇವಸ್ಥಾನಕ್ಕೆ ಹೋಗಿ ದೇವರನ್ನು ನೆನೆದು ನಮಸ್ಕರಿಸಬೇಕು.

**ದೇವಾಲಯಗಳು**

ಯಳಂದೂರು ಗ್ರಾಮವು ಹಲವಾರು ದೇವಾಲಯಗಳನ್ನು ಪಡೆದಿರುವ ಧಾರ್ಮಿಕ ಮತ್ತು ಸಾಂಸ್ಕೃತಿಕ ನಗರವಾಗಿದೆ. ಊರಿನ ಪ್ರಮುಖ ಭಾಗಗಳೆಲ್ಲವೂ ಸಹ ಹಲವು ದೇವಾಲಯಗಳಿದ್ದು ಈ ದೇವಾಲಯಗಳು ಊರಿನ ಇತಿಹಾಸ ಪರಂಪರೆ, ಧಾರ್ಮಿಕ ಹಿನ್ನೆಲೆಯನ್ನು ಬಿಚ್ಚಿಡುವಲ್ಲಿ ಸಹಕಾರಿಯಾಗಿವೆ. ಯಳಂದೂರು ತಾಲ್ಲೂಕು ಅತಿ ಚಿಕ್ಕ ತಾಲ್ಲೂಕಾಗಿದ್ದರು ದೇವಾಲಯಗಳ ಸಂಖ್ಯೆಯಲ್ಲಿ ಬಹಳ ಹಿರಿದಾಗಿದೆ. ಇಲ್ಲಿ ಹಲವಾರು ಪುರಾಣ ಪ್ರಸಿದ್ಧ ದೇವಾಲಯಗಳು, ಮಾರಿಗುಡಿಗಳೂ ಇವೆ ಇವುಗಳಲ್ಲಿ ಬಹುತೇಕ ವರ್ಷಕ್ಕೊಮ್ಮೆ ಜಾತ್ರೆ, ಕೊಂಡೋತ್ಸವಗಳು ನಡೆಯುವುದುಂಟು. ಅಷ್ಟೇ ಅಲ್ಲದೆ ಕೆಲವು ದೇವಮಂದಿರಗಳು ಗರ್ಭಗುಡಿ, ಶುಕನಾಸಿ, ಪ್ರಾಂಗಣವನ್ನು ಹೊಂದಿದೆ ಹಾಗೂ ಹಲವಾರು ಮಠಮಾನ್ಯಗಳು ಸ್ಥಾಪಿತವಾಗಿವೆ. ಇಲ್ಲಿನ ಪ್ರಮುಖ ದೇವಾಲಯಗಳೆಂದರೆ,

೧. ಗೌರೀಶ್ವರ ದೇವಾಲಯ
೨. ಲಕ್ಷ್ಮೀವರಹಸ್ವಾಮಿ ದೇವಾಲಯ
೩. ನಾಡಮೇಗಲ ಮಾರಮ್ಮನ ದೇವಾಲಯ

ಇವುಗಳಷ್ಟೇ ಅಲ್ಲದೇ ಊರಿನ ಒಳಭಾಗದಲ್ಲಿ ಹಲವಾರು ಸಣ್ಣಪುಟ್ಟ ದೇವಾಲಯಗಳು ಸಹ ಕಂಡುಬರುತ್ತವೆ.

**೧. ಗೌರೀಶ್ವರ ದೇವಾಲಯ**

ಯಳಂದೂರಿನಲ್ಲಿ ಕ್ರಿ.ಶ.೧೫೦೦ರಲ್ಲಿ ಹದಿನಾರಿನ (ಹದಿನಾಡು) ಪಾಳೇಗಾರರಾದ ಸಿಂಗದೇವನು ಕಟ್ಟಿಸಿರುವನೆಂಬ ಈ ಗೌರೇಶ್ವರ ದೇವಾಲಯದ

ವೈಶಿಷ್ಟ್ಯವನ್ನು ತಿಳಿಯಬೇಕಾದರೆ ಅಲ್ಲಿಯೇ ದೊರೆತಿರುವ ಶಿಲಾಶಾಸನವೊಂದೇ ಏಕೈಕ ಆಧಾರ.

ಸಾಮಾನ್ಯವಾಗಿ ದೇವರಾಜನೂ ಈ ದೇವಾಲಯವನ್ನು ಕಟ್ಟಿಸಿದನು ಎಂಬ ಪ್ರತೀತಿ ಇದೆ. ಅಷ್ಟೇ ಅಲ್ಲದೆ ದೇವರನ್ನು ಕಾಲಕ್ಕೆ ತಕ್ಕಂತೆ ವಿವಿಧ ರೀತಿಯಲ್ಲಿ ಕರೆಯುತ್ತಾ ಬಂದಿದ್ದಾರೆ. ಅಂದರೆ ಕೃತಯುಗದಲ್ಲಿ ತ್ರಿಪುರಾಂತಕವೆಂದು ಜಮದಗ್ನಿ ಮಹರ್ಷಿಗಳು, ಶ್ವೇತಾಯುಗದಲ್ಲಿ ನೀಲಕಂಠನೆಂದು ಶ್ರೀರಾಮಚಂದ್ರನೂ, ದ್ವಾಪರಯುಗದಲ್ಲಿ ಪಾಂಡುಪುತ್ರ ಲೋಕೇಶ್ವರನೆಂದೂ, ಕಲಿಯುಗದಲ್ಲಿ ಹದಿನಾಡಿನ ರಾಜರು ಗೌರೀಶ್ವರನೆಂದು ಪೂಜಿಸುತ್ತಿದ್ದರೆಂದು ತಿಳಿದುಬಂದಿದೆ.

ಹದಿನಾಡಿನ ಪಾಳೇಗಾರನಾದ ಮುದ್ದುರಾಜನು ಕ್ರಿ.ಶ.೧೬೫೪ರಲ್ಲಿ ಮಹಾದ್ವಾರದ ಮಂಟಪವನ್ನು ಈ ದೇವಾಲಯಕ್ಕೆ ಬಹಳ ರಮ್ಯವಾಗಿ ಕಟ್ಟಿಸಿದನು. ಇದು ಈ ತಾಲ್ಲೂಕಿಗೆ ಅತ್ಯಂತ ಪ್ರಾಚೀನ ಹಾಗೂ ಕಲಾಪೂರ್ಣ ಕಟ್ಟಡವಾಗಿದೆ. ಅಲ್ಲದೆ ಈ ದೇವಾಲಯವು ಬೇಲೂರು ಮತ್ತು ಹಳೇಬೀಡುಗಳ ಹೊರಗೋಡೆಗಳ ಮೇಲೆ ಹರಡಿರುವ ಚಕ್ರಗಳಂತೆ ಕಪ್ಪು ಶಿಲೆಯಲ್ಲಿ ರಚಿತವಾಗಿ ಚತುರ್ಮುಖಗಳನ್ನು ಹೊಂದಿದ್ದು ಸುಂದರವಾದ ಮಂಟಪ ಶೈಲಿಯಲ್ಲಿದೆ. ಶೈವಪುರಾಣದ ಮತ್ತು ರಾಮಾಯಣ, ಮಹಾಭಾರತದ ಕೆಲವು ಘಟನೆಗಳನ್ನು ದೇವಸ್ಥಾನದ ಸುತ್ತ ಕೆತ್ತಲಾಗಿದೆ. ಇಲ್ಲಿನ ಸಾರ್ವಜನಿಕರು ಈ ದ್ವಾರ ಮಂಟಪವನ್ನು ಬಳೇಮಂಟಪ ಎಂದು ಕರೆಯುತ್ತಾರೆ.

ಜನಪದರು ಹೇಳುವ ಪ್ರಕಾರ ಈ ಬಳೇಮಂಟಪವನ್ನು ದೇವತೆಗಳು ಒಮ್ಮೆ ರಾತ್ರಿಯ ವೇಳೆಯಲ್ಲಿ ಈ ಮಂಟಪವನ್ನು ಕಟ್ಟುತ್ತಿರುವಾಗ ಇನ್ನೇನೋ ಮುಗಿಯಿತೋ ಎನ್ನುವ ವೇಳೆಗೆ ಬೆಳಕಾಗಲು ದೇವತೆಗಳು ಮಾನವರ ಕಣ್ಣಿಗೆ ಕಾಣಿಸಿಕೊಳ್ಳಬಾರದೆಂಬ ಮಾತಿನಂತೆ ಮಂಟಪದ ಒಂದು ಮೂಲೆಯಲ್ಲಿ ಕಲ್ಲಿನ ಬಳೆಗಳನ್ನು ಕೆತ್ತುವಾಗ ಬೆಳಕಾದ ಕಾರಣ ಆ ಕೆಲಸವನ್ನು ಅರ್ಧಕ್ಕೆ ನಿಲ್ಲಿಸಿ ಹೋದರೆಂಬ ಕಥೆಯನ್ನು ಇಲ್ಲಿನ ಜನಪದರು ಹೇಳುತ್ತಾರೆ. ಜನಪದರ ಈ ನಂಬಿಕೆಯಂತೆ ಬಳೆಮಂಟಪದ ನಾಲ್ಕು ಮೂಲೆಗಳಲ್ಲಿ ಸಹ ಕಲ್ಲಿನಿಂದಲೇ ನಿರ್ಮಿಸಲಾದ ೪ ಬಳೆಗಳನ್ನು ನಿರ್ಮಿಸಿದ್ದಾರೆ. ಕಡೆಯ ಒಂದು ಭಾಗದಲ್ಲಿ ಮಾತ್ರ ಕೇವಲ ೨ ಬಳೆಗಳಿವೆ. ಹೀಗೆ ಜನಪದರು ತಮ್ಮದೇ ಕಲ್ಪನಾಶಕ್ತಿಯಿಂದ ಒಂದು ಕಥೆಯನ್ನು ಕಟ್ಟಿದ್ದಾರೆ.

ಹಾಗೆಯೇ ಮಹಾದ್ವಾರದ ಮುಂಭಾಗ ತೊಲೆಯ ಮೇಲೆ ಬ್ರಹ್ಮ ಮತ್ತು ಸರಸ್ವತಿಯನ್ನು ಮನೋಹರವಾಗಿ ಕೆತ್ತಿದ್ದಾರೆ. ಈ ಮಂಟಪದ ನಾಲ್ಕು ಕಂಬಗಳ ನಾಲ್ಕು ಮುಖಗಳಲ್ಲಿಯೂ ಮೂರು ಹಂತಗಳನ್ನು ಕಾಣಬಹುದು. ಒಂದು ಚಿತ್ರದಲ್ಲಿ ವಾಲಿ, ಸುಗ್ರೀವರ ಕಾಳಗವನ್ನು ಮೂಡಿಸಿದ್ದಾರೆ. ಇದೇ ಮಂಟಪದ ಮಧ್ಯಭಾಗದಲ್ಲಿ

ಭುವನೇಶ್ವರಿಯನ್ನು ಎರಡು ಅಡಿ ಆಳವನ್ನು ಕೊರೆದು ಅದರಲ್ಲಿ ಕಮಲದ ಮೊಗ್ಗನ್ನು ಬಿಡಿಸಿದ್ದಾರೆ. ಇಲ್ಲಿ ಇನ್ನೊಂದು ಮುಖ್ಯವಾಗಿ ಗಮನಿಸುವುದೇನೆಂದರೆ ಈ ಮಂಟಪದ ಮೂಲೆಮೂಲೆಯಲ್ಲಿ ಬಳೆಗಳನ್ನು ಒಂದರೊಳಗೊಂದು ಜೋಡಿಸಿದಂತೆ ಒಂದೆ ಕಲ್ಲಿನಲ್ಲಿ ಕೆತ್ತಿರುವುದು ಅತ್ಯಂತ ಮನೋಹರ ಮತ್ತು ಅದ್ಭುತವಾಗಿದೆ. ಇದೇ 'ಬಳೇ ಮಂಟಪ' ಎಂದಾಗಿದೆ. ಅಷ್ಟೇ ಅಲ್ಲದೆ ಈ ಮಂಟಪದಲ್ಲಿ ಮುದ್ದುರಾಜನ ಪ್ರತಿಕೃತಿಯೂ ಇದೆ. ಮಹಾದ್ವಾರದ ಕಂಬದಲ್ಲಿ ಅಂಜಲಿ ಹಸ್ತವಿರುವ ಎರಡು ಭಕ್ತ ವಿಗ್ರಹಗಳ ಚಿತ್ರವಿದೆ.

ಈ ಮಂಟಪದ ಹಿಂದೆ ಪಂಚಲಿಂಗಗಳನ್ನು ಪ್ರತಿಷ್ಠಾಪಿಸಿ ಅವುಗಳಿಗೆ ಭವ್ಯವಾದ ಮಂದಿರವನ್ನು ನಿರ್ಮಿಸಿದ್ದಾರೆ. ಇಲ್ಲಿ ಅಂದಿನಿಂದ ಇಂದಿನವರೆಗೂ ಹಬ್ಬದ ದಿನಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಶಿವರಾತ್ರಿ ಹಬ್ಬದ ದಿನದಂದು ಎರಡು ದಿನಗಳವರೆಗೆ ಬಹಳ ವಿಜೃಂಭಣೆಯಿಂದ ದೇವಸ್ಥಾನವನ್ನು ಅಲಂಕರಿಸಿ ಶಿವನಿಗೆ ಸಂಬಂಧಿಸಿದ ಕಥೆ, ಪುರಾಣಗಳನ್ನು ಹೇಳಿಸುತ್ತ ಜಾಗರಣೆ ಮಾಡುತ್ತಾರೆ ಸುತ್ತಮುತ್ತಲ ಗ್ರಾಮದಿಂದ ಭಕ್ತರು ಆಗಮಿಸಿ ಹಲವು ಹರಕೆಗಳನ್ನು ಹೊತ್ತು ತೀರಿಸುತ್ತಾರೆ.

ಅಲ್ಲಿನ ಜನತೆಯ ನಂಬಿಕೆಯಂತೆ ಹಿಂದೆ ಯಳಂದೂರು ಗ್ರಾಮವು ಈ ದೇವಾಲಯದ ಗರ್ಭಗುಡಿಯಲ್ಲಿರುವ ದೇವರ ಪಾದಗಳಿರುವ ಆಳದಲ್ಲಿ ಇತ್ತು. ಇಂದು ಗ್ರಾಮವು ಮೇಲೆ ಬೆಳೆದು ದೇವಸ್ಥಾನದ ಗರ್ಭಗುಡಿಗಿಂತಲೂ ಎತ್ತರದಲ್ಲಿದೆ ಎಂದು ಹೇಳುತ್ತಾರೆ.

ಈ ಸ್ಮಾರಕವು ಭಾರತ ಸರ್ಕಾರದ ೧೯೫೮ರ ಪ್ರಾಚೀನ ಸ್ಮಾರಕ ಮತ್ತು ಪುರಾತನ ಅವಶೇಷಗಳಿಂದ ಕೂಡಿದ ಸ್ಥಳಗಳಿಗೆ ಸಂಬಂಧಿಸಿದ ಶಾಸನದ ೨೪ನೇ ವಿಧಿಗೆ ಅನುಸಾರವಾಗಿ ರಾಷ್ಟ್ರೀಯ ಪ್ರಮುಖ ಸ್ಮಾರಕವೆಂದು ಘೋಷಿಸಲ್ಪಟ್ಟಿದೆ ಹಾಗೂ ಐತಿಹಾಸಿಕ ಸ್ಥಳವೆಂದು ಪರಿಗಣಿಸಲ್ಪಟ್ಟಿದೆ.

**೨. ಲಕ್ಷ್ಮೀವರಹಸ್ವಾಮಿ ದೇವಸ್ಥಾನ**

ಈ ದೇವಾಲಯ ಸಹ ಊರಿನ ಮಧ್ಯಭಾಗದಲ್ಲಿದೆ. ಯಳಂದೂರಿನಿಂದ ಕೊಳ್ಳೇಗಾಲಕ್ಕೆ ಹೋಗುವ ರಸ್ತೆಯ ಎಡಕ್ಕೆ ಗೌರೀಶ್ವರ ದೇವಾಲಯ ಕಂಡುಬಂದರೆ ಬಲಭಾಗಕ್ಕೆ ವರಹಸ್ವಾಮಿಯ ದೇವಾಲಯವಿದೆ. ಈ ದೇವಾಲಯ ಪೂರ್ವದಲ್ಲಿ ಜೈನದೇವಾಲಯವಾಗಿದ್ದು ತದನಂತರ ವೈಷ್ಣವ ದೇವಾಲಯವಾಗಿರುವ ಪ್ರತೀತಿ ಇದೆ. ಇದಕ್ಕೆ ಸಾಕ್ಷಿಯಾಗಿ ಅನೇಕ ಜೈನಮುನಿಗಳ ಭಗ್ನ ಶಿಲ್ಪಗಳು ದೇವಾಲಯದ ಒಳಭಾಗದಲ್ಲಿ ಇನ್ನೂ ಸಹ ದೊರೆಯುತ್ತದೆ. ಹಾಗೂ ೧೮೮೦ರಲ್ಲಿ ದಿವಾನ್

ಪೂರ್ಣಯ್ಯನವರಿಗೆ ಜಹಗೀರಿಯಾಗ ಯಳಂದೂರು ಬಂದ ಮೇಲೆ ಆ ಸ್ಥಳದಲ್ಲಿ ಯರಿಯೂರಿನಿಂದ ವರಾಹಾಮೂರ್ತಿಯನ್ನು ತಂದು ಪ್ರತಿಷ್ಠಾಪಿಸದಂತೆ ಕಂಡುಬಂದಿದೆ. ಈ ದೇವಮಂದಿರದಲ್ಲಿ ಪ್ರತಿ ಶನಿವಾರ ಪೂಜೆ ನಡೆಯುವುದರ ಜೊತೆಗೆ ಹಬ್ಬದ ದಿನಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ.

ಯಳಂದೂರಿನಲ್ಲಿ ಇನ್ನೂ ಹಲವಾರ ದೇವಾಲಯಗಳಿವೆ. ಅವುಗಳಲ್ಲಿ ಹೊನ್ನೊಳೆ ಪಕ್ಕದಲ್ಲಿ ಆಂಜನೇಯನ ದೇವಸ್ಥಾನವಿದೆ. ಇದನ್ನು ಜಪದಕಟ್ಟೆ ದೇವಸ್ಥಾನ ಎನ್ನುತ್ತಾರೆ. ಇಲ್ಲೇ ಗಣಪತಿ ದೇವಸ್ಥಾನವಿದೆ. ಹಾಗೆಯೇ ಯಳಂದೂರು ಕೊಳ್ಳೇಗಾಲದ ರಸ್ತೆಯಲ್ಲೂ ಕಾಳಮ್ಮ ತಾಯಿಯ ದೇವಸ್ಥಾನವಿದೆ. ಇದನ್ನು ಅಕ್ಕಸಾಲಿಗರ ವಂಶಸ್ಥರು ಪೂಜಿಸುತ್ತಿದ್ದಾರೆ. ಇದೇ ಕಾಳಮ್ಮನ ಗುಡಿಯ ಎದುರುಗಡೆಯ ಬೀದಿಯಲ್ಲಿ ಎಲ್ಲಮ್ಮ ತಾಯಿಯ ದೇವಸ್ಥಾನವಿದೆ. ಇದನ್ನು ಮಾಂಬಳ್ಳಿಯ ಪಾಪಯ್ಯನವರ ವಂಶಸ್ಥರು ಪೂಜಿಸುತ್ತಿದ್ದಾರೆ. ಹೀಗೆ ಹಲವು ವಿಶಿಷ್ಟ ದೇವತೆಗಳು ಕಂಡುಬರುತ್ತವೆ. ವರಾಹವತಾರದ ಈತನು ತಮ್ಮ ಬೆಳೆಗಳನ್ನು ಹಂದಿಗಳ ಕಾಟದಿಂದ ರಕ್ಷಿಸಲಿ ಎಂಬ ನಂಬಿಕೆಯಿಂದ ಇಲ್ಲಿನ ಜನತೆ ಈ ದೇವರಿಗೆ ಹರಕೆ ಕಟ್ಟುವುದು ಕಂಡುಬರುತ್ತದೆ. ಪಂಚಾಮೃತ, ಹಲವು ಅಭಿಷೇಕಗಳನ್ನು ಮಾಡಿಸುವುದು ಈ ದೇವರಿಗೆ ಸಂಬಂಧಿಸಿದ ಆಚರಣೆ ಸಂಕ್ರಾಂತಿಯ ಹಾಗೂ ಬಿಳಿಗಿರಿರಂಗನ ದೊಡ್ಡ ಜಾತ್ರೆಯ ಹಬ್ಬಗಳಲ್ಲಿ ಈ ದೇವಾಲಯಕ್ಕೆ ವಿಶೇಷ ರೀತಿಯ ಆಚರಣೆ ಕಂಡುಬರುತ್ತದೆ. ಕಾರಣ ಬಿಳಿಗಿರಿರಂಗನ ಬೆಟ್ಟದಲ್ಲಿ ನಡೆಯುವ ಜಾತ್ರೆಗಳಿಗೆ ಯಳಂದೂರು ಕೇಂದ್ರವಾಗಿರುವುದರಿಂದ ಬಿಳಿಗಿರಿರಂಗನಿಗೆ ನಡೆಯುವ ಎಲ್ಲಾ ರೀತಿಯ ವಿಶೇಷ ಪೂಜೆಗಳು ಇಲ್ಲಿ ನಡೆಯುತ್ತವೆ.

**೩. ನಾಡಮೇಗಲ ಮಾರಮ್ಮನ ದೇವಾಲಯ:**

ಪ್ರತಿಯೊಂದು ಗ್ರಾಮಕ್ಕೆ ಅವರದೇ ಆದ ಗ್ರಾಮದೇವತೆಗಳಿರುವುದು ಹಾಗೂ ಆ ದೇವತೆಗೆ ತಮ್ಮದೇ ವಿಧಿ–ವಿಧಾನಗಳ ಮೂಲಕ ಹಬ್ಬ–ಹರಕೆಗಳನ್ನು ಸಲ್ಲಿಸುವುದು, ಗ್ರಾಮದಲ್ಲಿ ಬರ ಪರಿಸ್ಥಿತಿ ಬಂದಾಗ ಗ್ರಾಮದೇವತೆಯ ಮೊರೆಹೋಗುವುದು. ಅದನ್ನು ಪರಿಹರಿಸಿದಾಗ ದೇವತೆಗಳನ್ನು ಸಂತೋಷಗೊಳಿಸಲು ಹಲವು ಆಚರಣೆಗಳನ್ನು ನಡೆಸುವುದು. ರೂಢಿಯಲ್ಲಿದೆ ಅಂತೆಯೇ ಯಳಂದೂರು ಗ್ರಾಮದ ಜನತೆಗೆ ನಾಡಮೇಗಲ ಮಾರಮ್ಮನೆಂಬ ಗ್ರಾಮದೇವತೆಯಿದೆ. ಆಕೆಯ ದೇವಸ್ಥಾನವನ್ನು 'ಮಾರಿಗುಡಿ' ಎಂದು ಕರೆಯುತ್ತಾರೆ. ಈಕೆ ತಮ್ಮ ಜನಪದ ದೇವತೆಯಾದ ಕಾರಣ ಈಕೆಯ ದೇವಸ್ಥಾನ ಊರಿನ ಹೊರಭಾಗದಲ್ಲಿ ಇದೆ. ಈ ದೇವಿಯನ್ನು ದಲಿತ ಜನಾಂಗ ಅತಿಹೆಚ್ಚಾಗಿ ಪೂಜಿಸುತ್ತಾರೆ. ಮತ್ತು ಇಲ್ಲಿನ ಪೂಜಾರಿ ಸಹ ದಲಿತನೇ. ಈ ದೇವಾಲಯದ ಮುಂಭಾಗ ಎರಡು ಗುಡಿಗಳಿವೆ. ಒಂದು ದೊಡ್ಡಮ್ಮ ತಾಯಿಯದು

ಮತ್ತೊಂದು ಚಿಕ್ಕಮ್ಮ ತಾಯಿಯದು. ದೇವಾಲಯದ ಮುಂಭಾಗ ಅರಳಿಮರ ಮತ್ತು ಬೇವಿನ ಮರಗಳಿವೆ. ಈ ದೇವಿಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ಗ್ರಾಮದೇವತೆಯ ಹಬ್ಬವನ್ನು ಯುಗಾದಿಯ ಸಮಯದಲ್ಲಿ ನಡೆಸಲಾಗುತ್ತದೆ. ಈ ದೇವಾಲಯವನ್ನು ಇಲ್ಲಿನ ಗ್ರಾಮದ ಜನರೇ ಅಭಿವೃದ್ಧಿಪಡಿಸಿದ್ದಾರೆ.

**ಯಳಂದೂರು ಸಂತೆ ಹಾಗೂ ವ್ಯಾಪಾರ**

ನಿಯಮಿತ ಕಾಲಾವಧಿಗೆ ಕೊಡುಕೊಂಡುಕೊಳ್ಳುವುದಕ್ಕಾಗಿ ಸೇರುವ ಜನರ ಗುಂಪಿಗೆ ಸಂತೆ ಎನ್ನುವರು ಸಂತೆಮಾಳ ಎಂದರೆ ಸಂತೆ ನಡೆಯುವ ಸ್ಥಳ ಎನ್ನುವುದು.

ಯಳಂದೂರಿನಲ್ಲಿರುವ ಸಂತೆಮಾಳವು ಒಂದು ಸುಂದರ ಹಾಗೂ ಉತ್ತಮ ಪರಿಸರವನ್ನು ಒಳಗೊಂಡಿದ್ದು, ಅದರ ಸುತ್ತಲೂ ಹೊಂದಿಕೊಂಡಂತೆ ದೇವಾಲಯಗಳು, ಬ್ಯಾಂಕು, ಪಟ್ಟಣ ಪಂಚಾಯಿತಿ ಕಟ್ಟಡ, ವ್ಯಾಪಾರ ಸ್ಥಳಗಳು ಇವೆ. ಪ್ರತಿ ಭಾನುವಾರವು ಸುತ್ತಲ ಜನರನ್ನು ತಪ್ಪದೆ ತನ್ನೆಡೆಗೆ (ಕೊಡುಕೊಳ್ಳುವವರನ್ನು) ಸೆಳೆದುಕೊಂಡು ಒಂದೆಡೆ ಸೇರಿಸಿ, ಪಟ್ಟಣದ ಜೀವನಾಡಿಯಂತೆ ಸದಾ ಕಾರ್ಯೋನ್ಮುಖವಾಗಿರುತ್ತದೆ. ಇದು ಊರಿನ ಹೃದಯಭಾಗದಲ್ಲಿದ್ದು ಕಂಗೊಳಿಸುತ್ತದೆ.

ಈ ಸಂತೆಗೆ ತನ್ನದೇ ಆದ ಐತಿಹ್ಯವಿದೆ. ಈ ಹಿಂದೆ ಪುರಸಭೆಯ ಅಧ್ಯಕ್ಷರಾಗಿದ್ದ ಶ್ರೀ ಆರ್.ನಾಗರಾಜು ಎಂಬುವರು ೧೧-೭-೧೯೭೨ರಲ್ಲಿ ತಮ್ಮ ಪಂಚಾಯಿತಿಯ ಸದಸ್ಯರನ್ನೊಳಗೊಂಡಂತೆ ಸಭೆ ಸೇರಿಸಿ, ಪುರಸಭೆಯ ಆದಾಯವನ್ನು ಹೆಚ್ಚಿಸುವ ಗುರಿಯನ್ನು ಇಟ್ಟುಕೊಂಡು ಸಂತೆ ಪ್ರಾರಂಭಿಸಬೇಕೆಂಬ ತೀರ್ಮಾನಕ್ಕೆ ಬಂದು, ಸರ್ಕಾರದ ಮುಂದಿನ ಕ್ರಮಕ್ಕೆ ಕಳುಹಿಸಿದರು. ಮುಂದೆ ವೈ.ಬಿ.ಪುಟ್ಟಸ್ವಾಮಿಯವರು ಅಧ್ಯಕ್ಷರಾಗಿದ್ದಾಗ ೭.೭.೭೧ರಂದು ಸರ್ಕಾರದ ಅನುಮತಿ ದೊರೆತು ಜನರ ಪುಣ್ಯವೆಂಬಂತೆ ಸಂತೆ ಪ್ರಾರಂಭವಾಗಿಯೇ ಬಿಟ್ಟಿತು. ಪ್ರಾರಂಭದ ದಿನಗಳಲ್ಲಿ ಅಂಬೆಗಾಲಿಡುತ್ತಾ ಮುಂದುವರೆದುಕೊಂಡು ಬಂದ ಈ ಸಂತೆ ಇಂದು ಬೃಹದಾಕಾರವಾಗಿ ಬೆಳೆಯುವ ಸಾಮರ್ಥ್ಯವನ್ನು ಹೊಂದಿಸಿಕೊಂಡು ಹೋಗುತ್ತಿದೆ.

ಈ ಸಂತೆಯಲ್ಲಿ ಹಸಿರುವಾಣಿ (ತರಕಾರಿ) ವ್ಯಾಪಾರವೇ ಹೆಚ್ಚಾಗಿ ಕಂಡುಬರುತ್ತದೆ. ಚಿಕ್ಕ ಚಿಕ್ಕ ಪನಸಾರೆ ಅಂಗಡಿಗಳು, ಸಣ್ಣ ಜವಳಿ ವ್ಯಾಪಾರ, ಇಲ್ಲಿ ಎಳನೀರು, ಕಾಯಿ, ಈರುಳ್ಳಿ, ಆಲೂಗಡ್ಡೆ, ತರಕಾರಿ ಸೊಪ್ಪು - ಇವೇ ಮೊದಲಾದ - ಎಲ್ಲಾ ರೀತಿಯ ತರಕಾರಿ ವಸ್ತುಗಳು ಇಲ್ಲಿ ಸಿಗುತ್ತದೆ. ಇಲ್ಲಿ ಚಿಕ್ಕ ಮಕ್ಕಳ ಆಟಿಕೆ ಸಾಮಾನುಗಳು, ಚಾಪೆ ಕರಕುಶಲ ವಸ್ತುಗಳು, ಹಗ್ಗಗಳು ಕೆಲವು ಚಿಕ್ಕಪುಟ್ಟ ವಸ್ತುಗಳ ಬಿಡಿ ಭಾಗಗಳು, ಪಾದರಕ್ಷೆ, ಗಿಡಮೂಲಿಕೆಯ ಔಷಧಿಗಳು ಜೇನುತುಪ್ಪ ಮೊದಲಾದ ವನಸ್ಪತಿಗಳು ದೊರೆಯುತ್ತವೆ.

ಜನರು ಚಿಕ್ಕ ಮಕ್ಕಳು ಸಂತೆಗಳಲ್ಲಿ ಸಂತೋಷದಿಂದ ಪಾಲ್ಗೊಳ್ಳುವಂತೆ ಮಾಡಲು ಆಗಾಗ್ಗೆ ಆಟಿಕೆಯ ಪ್ರದರ್ಶನಗಳು ನಡೆಯುತ್ತವೆ.

**ವ್ಯಾಪಾರ:** ವ್ಯಾಪಾರವೆಂದರೆ ಸರಕು-ಸೇವೆಗಳ ಖರೀದಿ ಮತ್ತು ಮಾರಾಟ ಅಂದರೆ ಸರಕು ಸೇವೆಗಳ ವಿನಿಮಯ. ಬಳಕೆಯ ಭಾಷೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಎಂಬ ಪದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸುವುದುಂಟು.

ಯಳಂದೂರಿನಲ್ಲಿ ಅಡಿಕೆ, ರೇಷ್ಮೆ, ಬೆಲ್ಲ, ರಾಗಿ, ತೆಂಗು (ಎಳನೀರು) ಕರಿಕಲ್ಲು, ಜೋಳ, ಎಲೆ, ಬಟ್ಟೆಯ ವ್ಯಾಪಾರ ಚೆನ್ನಾಗಿ ನಡೆಯುತ್ತಾ ಬರುತ್ತಿದೆ.

ರೇಷ್ಮೆ ಹುಳುವನ್ನು ಹೆಚ್ಚಾಗಿ ಸಾಕುವ ಸುತ್ತಮುತ್ತಲಿನ ಜನರು, ರೇಷ್ಮೆ ವ್ಯಾಪಾರದಲ್ಲಿ ಹಲವರನ್ನು ತೊಡಗಿಸಿಕೊಂಡಿದೆ. ಬೆಲ್ಲ ತಯಾರಿಕೆ ಹಾಗೂ ಮಾರಾಟದಲ್ಲಿ ಜಿಲ್ಲೆಯಲ್ಲಿಯೇ ತನ್ನ ಸ್ಥಾನವನ್ನು ಉಳಿಸಿಕೊಂಡಿದೆ. ಎಳನೀರು ಕಾಯಿ-ಅಡಿಕೆ-ಎಲೆಯಲ್ಲಿ ಗಮನಾರ್ಹವಾದ ಬೆಳವಣಿಗೆಯನ್ನು ಕಾಣಬಹುದು. ಇತ್ತೀಚೆಗಂತೂ ಚಿನ್ನಬೆಳ್ಳಿಯ ವ್ಯಾಪಾರವು ವೃದ್ಧಿಗೊಳ್ಳುತ್ತಿದೆ. ಶ್ರೇಷ್ಠಮಟ್ಟದ ಕರಿಕಲ್ಲಿನ(ಗಣಿಗಾರಿಕೆ) ವ್ಯಾಪಾರವು ಉತ್ತಮ ಸ್ಥಾನದಲ್ಲಿದ್ದು, ಹಲವಾರು ಜನರಿಗೆ ಉದ್ಯೋಗವನ್ನೂ ಒದಗಿಸಿದೆ.

ಕೆಲವೊಂದು ಅಂಗಡಿಯಲ್ಲಿ (ಬಳೇಪೇಟೆಯೂ ಸೇರಿದಂತೆ) ಹೋಲ್‌ಸೇಲ್ ದರದಲ್ಲಿ ವಸ್ತುಗಳು ದೊರೆಯುತ್ತಿದ್ದು ವ್ಯಾಪಾರ ಮಾಡುವವರಿಗೆ ಅನುಕೂಲವಾಗಿದೆ. ಪ್ರಕೃತಿಯ ವರಪ್ರಸಾದವೆಂಬಂತೆ ಹೆಚ್ಚಾಗಿ ಭತ್ತವನ್ನು ಬೆಳೆದು ಮಾರಾಟ ಮಾಡುವುದನ್ನು ಕಾಣಬಹುದು. ಸಾರಿಗೆ ಸೌಲಭ್ಯಕ್ಕೆ ಉತ್ತಮ ಸ್ಥಳವಾಗಿದ್ದು, ವ್ಯಾಪಾರ ವಾಣಿಜ್ಯದಲ್ಲಿ ಮುಂದಿನ ದಿನಗಳಲ್ಲಿ ಬಹಳಷ್ಟು ಪ್ರಗತಿ ಕಂಡುಬರುವುದರಲ್ಲಿ ಸಂಶಯವಿಲ್ಲ.

**ಯಳಂದೂರಿನ ಕ್ರೀಡೆಗಳು**

ಕ್ರೀಡೆ(ಆಟ) ಮನುಷ್ಯರಿಗೆ ಬೇಕಾದ ಆರೋಗ್ಯದ ಅಂಗಸಾಧನೆ. ಈ ಕ್ರೀಡೆಯಲ್ಲಿ ತೊಡಗುವುದರಿಂದ ತನಗರಿವಿಲ್ಲದೆ ಅಂಗಾಂಗಗಳು ವೃದ್ಧಿಹೊಂದಿ ದೇಹ ಬೆಳೆಯುವುದಕ್ಕೆ ಕಾರಣವಾಗಿದೆ. ಆದ್ದರಿಂದ ಕ್ರೀಡೆ ಒಂದಲ್ಲ ಒಂದು ರೀತಿ ಮನುಷ್ಯರಿಗೆ ಮುಖ್ಯ ಸಾಧನವಾಗಿದೆ.

ಯಳಂದೂರಿನಲ್ಲಿ ಹಬ್ಬಗಳು ಬಂದಾಗ ಮಾತ್ರ ಮನುಷ್ಯನ ಶಕ್ತಿ ಪ್ರದರ್ಶನಕ್ಕೆ ಕ್ರೀಡೆಗಳೇ ಪ್ರಮುಖವಾಗಿದೆ. ಗರಡಿಸಾಧನೆ, ಈಜುವುದು, ಕತ್ತಿವರಸೆ, ದೊಣ್ಣೆವರಸೆ, ಕಲ್ಲುಗುಂಡು ಎತ್ತುವುದು, ಇವುಗಳು ಸಾಮಾನ್ಯವಾಗಿತ್ತು. ಅಲ್ಲದೆ ಹಳ್ಳಿಗಳಲ್ಲೂ ನಾವು ನೋಡುತ್ತಿದ್ದೇವೆ. ಚಿಣ್ಣಿಕೋಲಾಟ, ಲಗ್ಗೆ ಚೆಂಡಾಟ, ಕಬ್ಬಡ್ಡಿ ಆಟ, ಮರಕೋತಿ ಆಟ,

ಕಡ್ಡಿ ಆಟ, ಓಟಗಳು ಮುಂತಾದ ಆಟಗಳೆಲ್ಲವು ಹಿಂದಿನ ಕ್ರೀಡೆಗಳಾಗಿದ್ದವು. ಈ ಬಗ್ಗೆ ಹೇಳುವುದಾದರೆ ಇತ್ತೀಚೆಗೆ ಮೈದಾನಗಳ ಕೊರತೆ, ಮಾರ್ಗದರ್ಶಿಗಳ ಕೊರತೆಗಳಿಂದ ಜನರಲ್ಲಿ ಆಸಕ್ತಿ ಕಡಿಮೆಯಾಗುತ್ತಿದೆ. ಅಲ್ಲದೆ ಪ್ರೋತ್ಸಾಹಗಳು ಕಡಿಮೆಯಾಗುತ್ತಿದೆ. ರೈತಾಪಿ ಜನಗಳು ತಮ್ಮ ಗದ್ದೇ–ಹೊಲ, ತೋಟ ಕೂಲಿಕೆಲಸ ಮುಂತಾದವುಗಳ ಕಡೆಗೆ ಗಮನ ಹೆಚ್ಚಾಗುತ್ತಿದೆ.

**ಜಾನಪದ ಪ್ರಸೂತಿ ತಜ್ಞೆ ಜಲ್ಲೆ ಸಿದ್ದಮ್ಮ**

ಜಲ್ಲೆ ಸಿದ್ಧಮ್ಮ ಚಾಮರಾಜನಗರ ತಾಲ್ಲೂಕು ಕಾಡಿಗೆರೆಯ ಸೋಲಿಗ ಜನಾಂಗದ ಹಾಲೇಗೌಡ ಮತ್ತು ಜಡೇಮಾದಮ್ಮ ಎಂಬ ದಂಪತಿಗಳ ೪ನೇ ಮಗಳಾಗಿ ಜನಿಸಿದರು. ಚಿಕ್ಕಂದಿನಿಂದಲೂ ತಂದೆ–ತಾಯಿಯ ಒಡನಾಟದಲ್ಲಿಯೇ ಬೆಳೆದ ಸಿದ್ದಮ್ಮ ಕಾಡು–ಮೇಡುಗಳನ್ನು ಲೆಕ್ಕಿಸದೇ ಎಳೆ ವಯಸ್ಸಿನಲ್ಲಿಯೇ ಸುತ್ತಾಡಿದಳು. ಯಾವುದೇ ಶಾಲೆಗೆ ಹೋಗಿ ಶಿಕ್ಷಣ ಪಡೆಯದ ಸಿದ್ದಮ್ಮ ಪೋಡಿನ ಹಿರಿಯರ ಮಾರ್ಗದರ್ಶನದಲ್ಲಿ ಬೆಳೆದರು. ಸಿದ್ದಮ್ಮನ ತಂದೆತಾಯಿಯರು ಯಾವುದೇ ಹಣದಾಸೆ ಇಲ್ಲದೆ ನೋವು ನಲಿವುಗಳಿಗೆ ಸ್ಪಂದಿಸುತ್ತಾ ತಮ್ಮ ಸಮುದಾಯಕ್ಕೆ ಸಲ್ಲಿಸುತ್ತಿದ್ದ ಸೇವೆಯನ್ನು ಕಣ್ಣಾರೆ ಕಂಡು ಅನುಭವ ಪಡೆದ ಸಿದ್ದಮ್ಮ ಅವರ ಗುಣಗಳನ್ನು ರಕ್ತಗತ ಮಾಡಿಕೊಂಡರು. ದಿನಗಳು ಕಳೆದಂತೆ ಸಿದ್ದಮ್ಮ ಮರಿಜಿಂಕೆಯಂತೆ ಬೆಳೆಯತೊಡಗಿದಳು.

ಬಾಲ್ಯಜೀವನದ ಉದ್ದಕ್ಕೂ ಯಾವುದೇ ರೀತಿಯ ಶಿಕ್ಷಣವಿಲ್ಲದೆ ಓದು ಬರಹಗಳಿಲ್ಲದೆ, ಸಾಂಪ್ರದಾಯಿಕ ಶಿಕ್ಷಣವನ್ನು ತಂದೆ, ತಾಯಿಯಿಂದ, ಸಮುದಾಯದಿಂದ ಕಲಿತು ವನದೇವಿಯ ಮಗಳಾಗಿ ಬಾಲ್ಯದಲ್ಲಿ ತನ್ನ ಕೌಶಲ್ಯತೆಯನ್ನು ಬೆಳೆಸಿಕೊಂಡಳು. ತಂದೆತಾಯಿಯ ಜೊತೆಯಲ್ಲಿಯೇ ಸಿದ್ದಮ್ಮ ಬೇಡಗುಳಿ, ಗೊರೆಹಟ್ಟಿ, ಹತ್ತಿಕಾನಿ, ಹೊನ್ನಮೇಟಿ, ಬೆಳಬ್ಬೆ, ಆನೆಗುಂದಿ, ಮಾಗಳಿನಾಥ ಕುರುಬ ಡಿಗ್ಗಿಗಳಲ್ಲಿ ವಾಸಮಾಡಿ ಅಲ್ಲಿನ ಜೀವ ವೈವಿಧ್ಯಗಳ ಬಗ್ಗೆ ಅಪಾರವಾದ ಜ್ಞಾನವನ್ನು ಗಳಿಸಿದರು. ಜೊತೆಗೆ ಗೆಡ್ಡೆಗೆಣಸು ಔಷಧಿ ಗಿಡಗಳ ಬಗ್ಗೆ ತಿಳಿದುಕೊಂಡರು. ಸಿದ್ದಮ್ಮನ ತಾಯಿ ಹೆರಿಗೆಗೆ ಹೋದರೆ, ಸಿದ್ದಮ್ಮ ತಾಯಿಯ ಸಹಾಯಕಿಯಾಗಿ ಹೋಗಿ ತಾಯಿ ಹೆರಿಗೆ ಮಾಡುವ ಹಲವಾರು ವಿಧಾನಗಳನ್ನು ಕಲಿತರು. ಹೆರಿಗೆ ಸಮಯದಲ್ಲಿ ಆಗುವ ಅನಾಹುತಗಳ ಬಗ್ಗೆ ಅರಿತರು. ಸಂದರ್ಭಕ್ಕೆ ತಕ್ಕಂತೆ ಎಣ್ಣೆಸ್ನಾನ ಮಾಡಿಸಿ ಕೂರಿಸಿ ಹೆರಿಗೆ ಮಾಡುತ್ತಿದ್ದರು ಜೀರಿಗೆ, ಮೆಣಸು ಹಲವು ಮಕ್ಕಳ ತಾಯಿ ಬೇರು, ಬೆಳ್ಳುಳ್ಳಿ, ಅಂಬಟೆಸೊಪ್ಪಿನ ರಸ ಮುಂತಾದ ಗಿಡಗಳನ್ನು ಉಪಯೋಗಿಸುವ ವಿಧಾನಗಳನ್ನು ಕರಗತ ಮಾಡಿಕೊಂಡರು. ಹೀಗೆ ತನ್ನ ೬–೧೨–೧೩ನೇ ವಯಸ್ಸಿನವರೆಗೂ ಸಿದ್ಧಮ್ಮ ತಾಯಿಯಿಂದ ಸಾಂಪ್ರದಾಯಿಕ ಕಲೆಯಾದ ಪ್ರಸೂತಿ ವಿಧಾನವನ್ನು ಬಹುಮಟ್ಟಿಗೆ ತಿಳಿದುಕೊಂಡರು.

ಚಿಕ್ಕ ವಯಸ್ಸಿನಲ್ಲೇ ಸಿದ್ದಮ್ಮ ಬಿಳಿಗಿರಿರಂಗನ ಬೆಟ್ಟದ ಯರಕನ ಗದ್ದೆಯ ಪೋಡಿನ ಜಲ್ಲೆ ಮಾದೇಗೌಡನ ಸೌಂದರ್ಯಕ್ಕೆ ಮನಸೋತು ಸೋಲಿಗರ ಸಂಪ್ರದಾಯದಂತೆ ಮದುವೆಯಾದರು. ಗಂಡನ ಮನೆಯಲ್ಲಿ ಸಿದ್ದಮ್ಮನು ವ್ಯವಸಾಯದ ಕೆಲಸಗಳನ್ನು ಮಾಡಿ ಕೂಲಿ ಕಂಬಳಿಗಳನ್ನು ಮಾಡುತ್ತಾ ತನ್ನ ಸಂಸಾರದ ಜೀವನವನ್ನು ತುಂಬಾ ಖುಷಿಯಿಂದಲೇ ಕಳೆದರು. ತನ್ನ ೧೮ನೇ ವಯಸ್ಸಿನಲ್ಲಿ ಮೊದಲ ಮಗುವಿಗೆ ತಾಯಿಯಾದ ಸಿದ್ದಮ್ಮ ೩ ಗಂಡು ೫ ಹೆಣ್ಣುಮಕ್ಕಳ ತಾಯಿಯಾಗಿ ಸಾಂಸಾರಿಕ ಜೀವನದ ಎಲ್ಲ ಮಜಲುಗಳನ್ನು ಕಂಡರು.

ಸಿದ್ದಮ್ಮನು ತನ್ನ ಸಾಂಪ್ರದಾಯಿಕ ಪ್ರಸೂತಿಯ ಬಗ್ಗೆ ಸುಮಾರು ೨೦-೨೫ ವರ್ಷಗಳ ಕಾಲ ತಮ್ಮ ಅಮೂಲ್ಯವಾದ ಸೇವೆಯನ್ನು ಸಮುದಾಯಕ್ಕೆ ಅರ್ಪಿಸುತ್ತಾ ಬಂದರು. ಪ್ರಸೂತಿಯನ್ನು ಮಾಡಿಸುವುದೊಂದು ಸೇವೆ ಎಂದು ತಿಳಿದು ಒಂದು ಹೆಣ್ಣಿನ ತಾಯ್ತನದ ಹಿರಿಮೆಯ ವಿಚಾರವನ್ನು ತಿಳಿದ ಈ ಮಹಾತಾಯಿ ಸಾವುನೋವಿನ ಮಧ್ಯ ಸಿಕ್ಕಿಕೊಂಡು ಒದ್ದಾಡುವ ಒಂದು ಹೆಣ್ಣಿನ ಪುನರ್ಜನ್ಮವನ್ನು ಕೊಡುತ್ತಾರೆ. ಹಣ ಕೀರ್ತಿಗಳನ್ನು ಸಂಪಾದಿಸುವ ಆಸೆಯನ್ನು ಬಿಟ್ಟು ಮಾನವೀಯ ಮೌಲ್ಯಗಳಿಗೆ ಸ್ಪಂದಿಸಿ ಸಮಯದ ಪರಿವಿಲ್ಲದೆ ಹಗಲು ರಾತ್ರಿಗಳನ್ನು ಲೆಕ್ಕಿಸದೇ ಈ ಕಾಯಕದಲ್ಲಿ ತೊಡಗಿಸಿಕೊಂಡು ಇದುವರೆವಿಗೆ ಸುಮಾರು ಸಾವಿರಕ್ಕೂ ಹೆಚ್ಚು ಪ್ರಸೂತಿಯನ್ನು ಮಾಡಿರುತ್ತಾರೆ.

ಜಲ್ಲೆ ಸಿದ್ದಮ್ಮನವರಿಗೆ ಸುಮಾರು ೧೫೦ಕ್ಕೂ ಹೆಚ್ಚು ಔಷಧಿಗಳ ಪರಿಚಯವಿದೆ. ಅಲ್ಲದೆ ಈ ಗಿಡಗಳ ಭಾಗಗಳನ್ನು ಪತ್ತೆಹಚ್ಚಿ ಎಲೆ, ಕಾಯಿ, ಹಣ್ಣು, ಬೇರು, ತೊಗಟೆಗಳಿಂದ ರಸಗಳನ್ನು ಮಾಡಿ ಕುಡಿಸುವ ವಿಧಾನವು ಸಾಂಪ್ರದಾಯಿಕವಾದ ರೀತಿಯಲ್ಲಿದೆ. ಔಷಧಿ ಗಿಡಗಳು ಇರುವ ಜಾಗ, ಅವುಗಳ ಬಣ್ಣ, ಅವುಗಳ ಪ್ರಮಾಣವು ಸಹ ತಲೆಮಾರಿನಿಂದ ಬಂದದ್ದಾಗಿದೆ. ಪ್ರಸೂತಿ ಕಾಲಕ್ಕೆ ಕೊಡುವ ಔಷಧಿಯ ಪ್ರಮಾಣವು ಗೆಜ್ಜಿಗೆ ಗಾತ್ರ ಗುರುಗಂಜಿ ಗಾತ್ರ, ಒಂದು ಅಡಕೆ ಗಾತ್ರ, ಕಿರುಬೆರಳು ಗಾತ್ರ ಈ ಪ್ರಮಾಣದಲ್ಲಿ ಔಷಧಿಯನ್ನು ಕೊಡುತ್ತಾರೆ. ಸೋಲಿಗ ಸಮುದಾಯದಲ್ಲಿ ಹೆರಿಗೆಯನ್ನು ಕೂರಿಸಿ ಮಾಡಿಸುತ್ತಾರೆ. ಹೆರಿಗೆಯ ಸಮಯದಲ್ಲಿ ಆಗುವಂತಹ ನೋವುಗಳಿಗೆ, ಅನಾಹುತಗಳಿಗೆ ಔಷಧಿಯನ್ನು ಕಾಲಕಾಲಕ್ಕೆ ಒದಗಿಸುತ್ತಾಳೆ.

೧. ಮಗುವಿನ ಗಾತ್ರ ತೀರ ಕಡಿಮೆಯಾಗಿದ್ದರೆ ಎಲ್ಲ ಅವಯವಗಳು ಚಿಕ್ಕದಾಗಿ ಬೆಳೆದಿರುತ್ತವೆ. ಕೆಲವು ವೇಳೆ ಮಗುವಿನ ಅಂಗಾಂಗಗಳು ಊನವಾಗಿರುತ್ತದೆ. ಹೆರಿಗೆಯು ಸುಲಲಿತವಾಗಿ ಆಗುವುದಿಲ್ಲ.

೨. ೭ನೇ ತಿಂಗಳಲ್ಲಿ ಹೆರಿಗೆಯಾದರೆ ಮಗುವು ಉಳಿಯುವುದು ಬಹಳ ಅಪರೂಪ. ೮ನೇ ತಿಂಗಳಲ್ಲಿ ಹೆರಿಗೆಯಾದರೆ ಮಗುವಿನ ತೂಕ ಕಡಿಮೆ ಇರುವುದು. ಆದರೆ ಹೆರಿಗೆಯನ್ನು ಜೋಪಾನವಹಿಸಿ ಮಾಡಬೇಕು. ಮಗುವಿನ ಬಗ್ಗೆ ಬಹಳ

ಎಚ್ಚರಿಕೆಯನ್ನು ವಹಿಸಬೇಕು. ೯ನೇ ತಿಂಗಳಿಗಿಂತ ಒಂದು ವಾರ ಆಚೆ ಈಚೆ ಹೆರಿಗೆಯಾದರೆ ಆರೋಗ್ಯವಂತವಾದ ೨ ರಿಂದ ೩ ಕೆ.ಜಿ. ತೂಕವುಳ್ಳ ಮಗುವು ಹುಟ್ಟುವುದು.

ಗರ್ಭಿಣಿ ತಾಯಿಯು ೧ರಿಂದ ೩ನೇ ತಿಂಗಳವರೆಗೆ ಬಹಳ ನಿಯಮಬದ್ಧವಾಗಿ ವಿಶ್ರಾಂತಿಯುತವಾಗಿ ಯಾವುದೇ ಇತರೆ ಔಷಧಿಗಳನ್ನು ಉಪಯೋಗಿಸದೇ ಖುಷಿಯಿಂದ ಇರಬೇಕು. ಸಾಸುವೆ, ಹೊನಗೊನೆ, ಅನ್ನೆ, ಕೀರೆ, ಎಡ್ಡ ಗಣಕೆ ಆಲೆ ಮುಂತಾದ ಸೊಪ್ಪುಗಳನ್ನು ತಿನ್ನಬೇಕು. ಯಾವುದೇ ಕಾರಣಕ್ಕೂ ಆರೋಗ್ಯವನ್ನು ಕೆಡಿಸಿಕೊಳ್ಳಬಾರದು.

೩ರಿಂದ ೬ ತಿಂಗಳವರೆಗೆ ಬಸಿರೆಂಗಸು ಅಲ್ಪಸ್ವಲ್ಪ ಕೆಲಸಗಳನ್ನು ಮಾಡಬೇಕು. ತಮಗೆ ಇಷ್ಟ ಬಂದ ಊಟಗಳನ್ನು ಮಾಡಬೇಕು. ವಿಶ್ರಾಂತಿಯನ್ನು ಪಡೆಯಬೇಕು. ಒಳ್ಳೆಯ ದೃಶ್ಯ, ಒಳ್ಳೆಯ ಭಾವನೆಗಳನ್ನು ಇಟ್ಟುಕೊಂಡು ನೆಮ್ಮದಿಯಿಂದಿರಬೇಕು. ಹೊಟ್ಟೆಯ ಮೇಲೆ ಭಾರವಾಗದೆ ಹಗುರವಾಗಿರಬೇಕು. ಕೆಮ್ಮು ಬಂದರೆ ಗಣಕೆಸೊಪ್ಪನ್ನು ಬೇಯಿಸಿ ತಿನ್ನಬೇಕು. ಅಡುಸೋಗೆ ರಸಮಾಡಿ ಕುಡಿಯಬೇಕು. ಭೇದಿಯಾದರೆ ನೇರಳೆ ಚಕ್ಕೆ ರಸಮಾಡಿ ನೇರಳೆ ಹಣ್ಣಿನ ರಸವನ್ನು ಕುಡಿಯಬಹುದು. ನಿಂಬೆಹಣ್ಣಿನ ರಸ; ಈ ರಸಕ್ಕೆ ಉಪ್ಪು ಮತ್ತು ಬೆಲ್ಲವನ್ನು ಉಪಯೋಗಿಸಬಹುದು.

**ಮೈ ಕೆರೆತ:** ಮೈಯಿಗೆ ಸರಿಹೊಂದುವಂತೆ ಬಿಸಿನೀರು ಹಾಕಿಕೊಳ್ಳಬಹುದು. ಈ ನೀರಿಗೆ ಕಹಿಬೇವಿನ ಸೊಪ್ಪನ್ನು ಹಾಕಿ ಸ್ನಾನ ಮಾಡಬೇಕು.

**ವಾಕರಿಕೆ:** ಶುಂಠಿ, ದನಿಯದಿಂದ ಕಾಫಿಮಾಡಿ ಕುಡಿಯಬೇಕು. ನಲ್ಲಿಕಾಯಿಯನ್ನು ಹಸಿಯಾಗಿ ರಸಮಾಡಿ ಕುಡಿಯಬೇಕು.

೬-೯ ತಿಂಗಳಲ್ಲಿ ಬಸುರೆಂಗಸು ಕ್ರಮಬದ್ಧವಾಗಿ ಆಹಾರವನ್ನು, ಬಿಸಿನೀರನ್ನು, ಹಣ್ಣಿನ ರಸಗಳನ್ನು ತೆಗೆದುಕೊಳ್ಳಬೇಕು. ಅವರಿಗೆ ಇಷ್ಟ ಬಂದ ಸೊಪ್ಪುಗಳನ್ನು, ಹಿಟ್ಟುಗಳನ್ನು ಕಾಲಕಾಲಕ್ಕೆ ತೆಗೆದುಕೊಳ್ಳಬೇಕು. ಯಾವುದೇ ಕಾರಣಕ್ಕೂ ಹಸಿಯಬಾರದು. ಜಗಳ ಮಾಡಬಾರದು, ಸರಿಯಾಗಿ ಕೈಗಳನ್ನು ಊರಿ ನಿಧಾನವಾಗಿ ಏಳುವುದು, ಕುಳಿತುಕೊಳ್ಳುವುದನ್ನು ಮಾಡಬೇಕು. ಮೈಕೈ ನೋವು ಆದರೆ ಬಿಸಿನೀರಿನಲ್ಲಿ ಸಂಜೆ ಸ್ನಾನ ಮಾಡಿದರೆ ಮೈಕೈನೋವು ಹೋಗುವುದು. ನಿದ್ರೆ ಚೆನ್ನಾಗಿ ಬರುತ್ತದೆ. ಈ ತಿಂಗಳಲ್ಲಿ ಎಲೆ-ಅಡಿಕೆಗಳನ್ನು ಹಾಕಿಕೊಳ್ಳಬೇಕು. ದಿನಾಲು ಬಾಳೆಹಣ್ಣನ್ನು ತಿನ್ನಬಹುದು, ಈ ತಿಂಗಳು ಸಣ್ಣಪುಟ್ಟ ಕೆಲಸಗಳನ್ನು ಮಾಡಬಹುದು. ಆದರೆ ಶ್ರಮದಾಯಕವಾದ ಕೆಲಸಗಳನ್ನು ಮಾಡಬಾರದು- ಹೊಟ್ಟೆಗೆ ಹಾಗೂ ತಲೆಗೆ ಭಾರ ಕೊಡುವಂತಹ ವಸ್ತುಗಳನ್ನು ಸಹ ಹೊರಬಾರದು.

ಮೈ ಕೈಗಳು ಊತ ಬಂದರೆ ಸಣ್ಣ ಮರಳಿಸೊಪ್ಪನ್ನು ಅರೆದು ಆ ಭಾಗಗಳಿಗೆ ಹಾಕಿ ಸಂಜೆ ಮತ್ತು ಬೆಳಿಗ್ಗೆ ಸ್ನಾನ ಮಾಡಬೇಕು. ಹೀಗೆ ೩ ದಿನಗಳು ಮಾಡಿದರೆ ಸಾಕು. ಕೆಮ್ಮು ಬಂದರೆ ಜಗಳಿಗಂಟಿ, ಚಕ್ಕೆಮಗ್ಗನ್ನು ನೀರಿನಲ್ಲಿ ನೆನೆಹಾಕಿ ನೀರನ್ನು ಕುಡಿಯಬೇಕು. ಬಸರೆಂಗಸಿಗೆ ಹೆರಿಗೆಯ ದಿನಗಳು ಹತ್ತಿರ ಬಂದಂತೆ ಹೆದರಿಕೆಯಾಗುವುದು. ಈ ಸಂದರ್ಭದಲ್ಲಿ ತಾಯಿ, ತಂದೆ, ಗಂಡ ಅಥವಾ ಅಕ್ಕ ಹತ್ತಿರದಲ್ಲಿ ಇದ್ದರೆ ಒಳ್ಳೆಯದು. ಹೆರಿಗೆ ದಿನ ಬಂದಾಗ ಕೆಳ ಹೊಟ್ಟೆಯಲ್ಲಿ ಹೆರಿಗೆ ನೋವು ಕಾಣಿಸಿಕೊಳ್ಳುವುದು. ಈ ಸಂದರ್ಭದಲ್ಲಿ ಹರಳೆಣ್ಣೆಯನ್ನು ಕಾಯಿಸಿ ಆರಿಸಿಕೊಂಡು ಕೂರಿಸಿ ಹೊಟ್ಟೆ ಮತ್ತು ನಡುವಿಗೆ ಎಣ್ಣೆ ಹಾಕಿ ನಿಧಾನವಾಗಿ ಹಚ್ಚಬೇಕು. ಇಷ್ಟ ಬಂದ ಹಣ್ಣುಗಳನ್ನು ತಿನ್ನಬಹುದು.

ಹೆರಿಗೆ ನೋವು ಹೆಚ್ಚಾಗುವುದು, ಆಗ ತಾಯಿ ನೋವನ್ನು ತಡೆಯಲಾರದೆ ಕಿರುಚಿಕೊಳ್ಳುವುದು, ಸ್ವಲ್ಪ ಸಮಯದಲ್ಲಿ ಮಗುವು ಹೊರಬರುವುದು, ಮಗು ಹೊರಗೆ ಬರುವಾಗ ಹೆರಿಗೆ ಮಾಡುವವರ ಕೈ ಸ್ವಚ್ಛವಾಗಿರಬೇಕು, ಬೆರಳುಗಳಲ್ಲಿ ಉಗುರುಗಳಿರಬಾರದು, ಕೈ ಗಾಯವಾಗಿರಬಾರದು, ಮಗುವನ್ನು ನಿಧಾನವಾಗಿ ಹಿಡಿದು ಶುಭ್ರವಾದ ಅಥವಾ ಹತ್ತಿಬಟ್ಟೆಯ ಮೇಲೆ ಹಾಕಿ, ಹರಿತವಾದ ಹೊಸ ಬ್ಲೇಡ್ ಅಥವಾ ಬಿದುರಿನ ಹಸಿ ಅಚ್ಚೆಯಿಂದ ಮಗುವಿನ ಹಸಿಯಾದ ಹೊಕ್ಕುಳಬಳ್ಳಿಯನ್ನು ಕೊಯ್ದು ಅಂಬಿನ ಎಲೆಯಿಂದ ಕಟ್ಟಬೇಕು. ಶುಭ್ರವಾದ ಒಣ ಹತ್ತಿಬಟ್ಟೆಯ ಮೇಲೆ ಮಲಗಿಸಿ ಮಗುವಿನ ಮೈಮೇಲಿನ ತೇವಾಂಶವನ್ನು ನಿಧಾನವಾಗಿ ತೆಗೆಯಬೇಕು. ಈ ಸಂದರ್ಭದಲ್ಲಿ ಮಗುವು ಕಿರುಚಿಕೊಳ್ಳುವುದು. ಮತ್ತು ಬಾಯಿಯನ್ನು ಸ್ವಚ್ಛತೆ ಮಾಡಬೇಕು. ಕಡಿಮೆ ತೂಕವಿರುವ ಮಕ್ಕಳಿಗೆ ಸ್ನಾನ ಮಾಡಿಸಬಾರದು. ಹೆರಿಗೆಯಾದ ೨-೩ ಗಂಟೆಗಳು ಕಳೆದ ಮೇಲೆ ತಾಯಿಯ ಹಾಲನ್ನು ಉಣ್ಣಿಸಬೇಕು. ಈ ಗಿಣ್ಣಾಲನ್ನು ಮಗುವು ಸಾಕಷ್ಟು ಕುಡಿದರೆ ಮಗುವು ಆರೋಗ್ಯಕರವಾಗಿ ಬೆಳೆಯುತ್ತದೆ. ಹಾಗೂ ೩ ತಿಂಗಳ ತನಕ ತಾಯಿ ಮಗುವಿನ ಆರೈಕೆ ಬಹಳ ಆರೋಗ್ಯಕರ ಅಗತ್ಯ. ತಾಯಿ ಮತ್ತು ಮಗು ಇರುವ ಕೊಠಡಿಯು ಗಾಳಿ ಬೆಳಕಿನಿಂದ ಹಾಗೂ ಸ್ವಚ್ಛತೆಯಿಂದ ಕೂಡಿರಬೇಕು. ಹೀಗೆ ಹಲವು ನಿಯಮಗಳನ್ನು ಅಳವಡಿಸಿಕೊಂಡಿದ್ದರು ಜಲ್ಲೆ ಸಿದ್ದಮ್ಮನವರು.

ಗಿರಿಜನರಲ್ಲಿ ಕೂರಿಸಿ ಹೆರಿಗೆ ಮಾಡುವ ಪದ್ಧತಿ ಹಳೆಯದಾದರು ವೈಜ್ಞಾನಿಕವಾಗಿ ಅದರ ಸತ್ಯತೆಗಳು ಇತ್ತೀಚೆಗೆ ಎಲ್ಲರಲ್ಲಿಯೂ ಜನಪ್ರಿಯವಾಗಿದೆ.

ಯಳಂದೂರಿನಲ್ಲಿ ಹಿಂದೆ ಸರ್ವೇಸಾಮಾನ್ಯವಾಗಿ ಮನೆಗಳು ನಾಡಂಚಿನ ಮನೆಗಳೇ ಹೆಚ್ಚಾಗಿದ್ದವು ಅವುಗಳಲ್ಲಿ ಕೆಲವು ಮನೆಗಳು ಮಂಗಳೂರು ಹೆಂಚಿನ ಮನೆಗಳಿದ್ದವು. ಇನ್ನೂ ಕೆಲವೇ ಕೆಲವು ಮಾಳಿಗೆ ಮನೆಗಳು ಕಂಡು ಬರುತ್ತಿದ್ದವು. ಇಂತಹ ಎಲ್ಲಾ ಮನೆಗಳಲ್ಲಿಯೂ ಶೌಚಾಲಯದ ವ್ಯವಸ್ಥೆ ಕಡಿಮೆ.

ಇತ್ತೀಚಿನ ಮನೆಗಳು ಮಂಗಳೂರು ಹಂಚಿನ ಮನೆಗಳ ಜೊತೆಗೆ ಹೆಚ್ಚಾಗಿ ತಾರ್ಸಿ ಮನೆಗಳು ಕಂಡು ಬರುತ್ತವೆ. ಈ ಮನೆಗಳಲ್ಲಿ ಮನೆಯ ಒಳಗೆ ಎಲ್ಲಾ ರೀತಿಯ ಸೌಲಭ್ಯ ಇರುವುದನ್ನು ಕಾಣುತ್ತೇವೆ. ಈ ಎಲ್ಲಾ ಬದಲಾವಣೆಗೆ ನಾಗರೀಕರಣವೇ ಕಾರಣವೆನ್ನಬಹುದು.

**ಮನೆಯಲ್ಲಿ ಬಳಸುವ ವಸ್ತುಗಳು**

ಹಿಂದೆ ಮಣ್ಣಿನ ಮಡಿಕೆಯಲ್ಲೆ ನೀರು ಕಾಯಿಸುವುದು, ಅಡಿಗೆ ಮಾಡುವುದು ಎಲ್ಲವೂ ಮಣ್ಣಿನ ಸಾಮಾಗ್ರಿಯಲ್ಲೇ ನಡೆಯುತ್ತಿತ್ತು. ಆದರೆ ಈಗ ಯಳಂದೂರು ಪ್ಲಾಸ್ಟಿಕ್ ಮತ್ತು ಸ್ಟೀಲ್‌ಮಯವಾಗಿರುವುದನ್ನು ಕಾಣುತ್ತೇವೆ. ಹಿಂದೆ ಒನಕೆ, ಬೀಸುವಕಲ್ಲು, ಮುಚ್ಚುಳು (ಮಡಿಕೆಗೆ ಮುಚ್ಚುವ ತಟ್ಟೆ) ಪಾಸಾಲೆ – (ಮಡಿಕೆ), ತಾಂಬಣ (ಬೆಸನ್) ಗುಡಾಣ (ಧಾನ್ಯ ತುಂಬಲು ಬಳಸುವುದು) ಅಂಡೆ (ಬಿದಿರಿನಿಂದ ಮಾಡಿ ಇದರಲ್ಲಿ ಉಪ್ಪುನ್ನು ಇಟ್ಟುಕೊಳ್ಳುವುದು).

**ಸೆಟ್ಗ** – (ಸೌಟು, ತೆಂಗಿನ ಚಿಪ್ಪಿನಿಂದ ಮಾಡುವುದು)

**ಕಲ್ಲಿನ ಮರಗೆ** – (ಮುದ್ದೆ ತೆಗೆಯಲು ಬಳಸುವುದು)

**ಬಿದಿರಿನ ತೊಂಬೆ** – (ಧಾನ್ಯ ಶೇಖರಣೆ ಮಾಡಲು ಬಳಸುವುದು)

**ಗುಣಿ** – (ನೆಲದಲ್ಲಿ ಧಾನ್ಯ ಶೇಖರಿಸುವುದು) ಇಲ್ಲಿ ಜೋಳವನ್ನು ತುಂಬಲು ಬಳಸುತ್ತಾರೆ.

**ಕಣಜ** : (ಭತ್ತ ತುಂಬುವುದಕ್ಕೆ ಬಳಸುವುದು)

**ಅರಿವೆ** – ನೀರು ತರಲು ಬಳಸುವುದು

**ಹಳಗೆ** (ಧಾನ್ಯ ಶೇಖರಿಸುವುದು)

**ತಂಬಿಗೆ** – (ನೀರು ಕುಡಿಯಲು ಬಳಸುವುದು)

**ಹರಿವಾಣ** – (ತಟ್ಟೆ)

**ತೆವಟಿಗೆ** – (ಊಟ ಮಾಡುವಾಗ ತಟ್ಟೆ ಇಟ್ಟುಕೊಳ್ಳುವುದು)

**ಬಿದುರಿನ ತಿಕ್ಕೆ** (ಮಡಿಕೆಗಳನ್ನು ಇಡಲು ಸಿಂಬಿಯ ಹಾಗೆ ಬಳಸುವುದು)

**ಗುಂಬ** (ದೇವರು ತರಲು ಬಳಸುವುದು)

**ಸೊಳ್ಳು ಅಥವಾ ಹಣತೆ** (ದೀಪ)

ಹೀಗೆ ಹಲವು ವಸ್ತುಗಳನ್ನು ಬಳಸುತ್ತಿದ್ದರು.

**ಕೃಷಿಗೆ ಬಳಸುವ ವಸ್ತುಗಳು:** ಹೊಲ ಊಳಲು ನೇಗಿಲು, ನೊಗ, ಎತ್ತುಗಳನ್ನು ಬಳಸುತ್ತಿದ್ದರು. ತಡಿಬುಂಡೆಯನ್ನು ಹೊಲದಲ್ಲಿ ಕಳೆ ತೆಗೆಯಲು ಬಳಸುತ್ತಿದ್ದರು. ಇದಕ್ಕೆ ಕಳಕೊಟ್ಟು ಎಂದೂ ಸಹ ಕರೆಯುತ್ತಿದ್ದರು.

**ಉಜ್ಜರಿ** – ಇದು ಸಹ ಕಳೆ ತೆಗೆಯಲು ಬಳಸುವುದು

**ತಿರುಗುಂಟೆ** – ಕಳೆ ತೆಗೆಯಲು ಬಳಸುವುದು

**ಮೇಳಿ** – ಹುಳುವಾಗ ಕೈಯಲ್ಲಿ ಹಿಡಿಯುವುದು

**ಬಿಳಿ** – ಹಗ್ಗ

**ಬಾರ್ಕಣಿ** – ಎತ್ತಿಗೆ ಹೊಡೆಯಲು ಬಳಸುವುದು

**ಮೂಗರಾಳಿ** – ಎತ್ತಿನ ಮೂಗಿಗೆ ದಾರಕಟ್ಟುವುದು

**ಎಗ್ಗುಂಟೆ** – ಕೊತ್ತಂಬರಿ ಕೀಳಲು ಬಳಸುವುದು

**ಲಾಳ** – ಹಸುವಿನ ಕಾಲಿಗೆ ಹಾಕುವುದು

**ಕಡಾಣಿ** – ಚಕ್ರ ಚಲಿಸಲು ಬಳಸುವುದು.

ನೀರು ಕಟ್ಟಲು ಗದ್ದೆ ಬದುವನ್ನು ಕತ್ತರಿಸಲು ಮತ್ತು ನೀರು ಹಾಯಿಸಲು ಎಲಕೊಟ್ಟನು ಬಳಸುತ್ತಿದ್ದರು.

ಹಾಗೆಯೇ ಧಾನ್ಯವನ್ನು ಹೊಲ ಗದ್ದೆಯಿಂದ ಸಾಗಿಸಲು ಮತ್ತು ಧಾನ್ಯಗಳನ್ನು ವ್ಯಾಪಾರ ಮಾಡಲು ಪರಸ್ಥಳಗಳಿಗೆ ಸಾಗಿಸಲು ಗಾಡಿಗಳನ್ನು ಹೆಚ್ಚಾಗಿ ಬಳಸುತ್ತಿದ್ದರು.

ಹೀಗೆ ಕೃಷಿಯೇ ತಮ್ಮ ಜೀವನದ ಮೂಲ ಆಧಾರವೆಂದು ಭಾವಿಸಿ ಬೆವರು ಸುರಿಸಿ ಕಷ್ಟದಿಂದ ದುಡಿಯುತ್ತಿದ್ದರು.

ಆದರೆ ಕೃಷಿ ಕೆಲಸದಲ್ಲಿ ಆಸಕ್ತಿ ಕಡಿಮೆಯಾಗಿ ಇತ್ತೀಚೆಗೆ ಅದನ್ನು ನಿರ್ವಹಿಸುವವರೇ ಕಡಿಮೆಯಾಗಿದ್ದಾರೆ. ಅಷ್ಟೇ ಅಲ್ಲದೆ ಪಟ್ಟಣ ಪ್ರದೇಶಗಳಿಗೆ ಯುವ ಜನಾಂಗದವರೇ ವಲಸೆಹೋಗುತ್ತಿದ್ದಾರೆ. ಜೊತೆಗೆ ಜನಸಂಖ್ಯೆ ಹೆಚ್ಚಾದಂತೆ ಹೊಲಗದ್ದೆಗಳನ್ನು ನಿವೇಶನವಾಗಿ ಮಾರ್ಪಡಿಸುತ್ತಿದ್ದಾರೆ.

**ಯಳಂದೂರಿನ ನೀರಾವರಿಯ ಇತಿಹಾಸ**

ದಿವಾನ್ ಪೂರ್ಣಯ್ಯನವರು ಈ ಯಳಂದೂರು ಪ್ರದೇಶವನ್ನು 'ಜಹಗೀರಿ'ಯಾಗಿ ಏಕೆ ಪಡೆದರು ಎಂದರೆ ಪೂರ್ವ ಪಶ್ಚಿಮ ಘಟ್ಟಗಳನ್ನು ಸರಪಳಿ ಕೊಂಡಿಯಂತೆ ಉತ್ತರ ದಕ್ಷಿಣವಾಗಿ ಸುಮಾರು ೮೦ ಕಿ.ಮೀ.ನಷ್ಟು ಹಬ್ಬಿರುವ ಶ್ರೀ ಬಿಳಿಗಿರಿರಂಗನಬೆಟ್ಟದ ಸಾಲು ಫಲವತ್ತಾದ ಮಣ್ಣಿನಿಂದಲೂ, ಶ್ರೀಗಂಧ, ತೇಗ, ಹೊನ್ನೆ,

ಮತ್ತಿ ಇತರ ಬೆಲೆಬಾಳುವ ಮರಗಳಿಂದಲೂ, ಈ ಬೆಟ್ಟದ ಸಾಲಿನಲ್ಲಿ ಮಳೆಬಿದ್ದು, ಪಶ್ಚಿಮದ ಮೈದಾನಕ್ಕೆ ಹರಿಯುವ ಕೊಲ್ಲಿಗಳು ಫಲವತ್ತಾದ ಭೂ ಪ್ರದೇಶಗಳು, ನೀಲಗಿರಿ ಬೆಟ್ಟದಲ್ಲಿ ಹುಟ್ಟಿ ದಕ್ಷಿಣೋತ್ತರವಾಗಿ ಹರಿಯುವ ಸುವರ್ಣಾವತಿ ನದಿಯ ಫಲವತ್ತಾದ ಬಯಲು ಪ್ರದೇಶಗಳು ಈ ಎಲ್ಲದಕ್ಕೂ ಮೇಲಾಗಿ ಶ್ರೀಬಿಳಿಗಿರಿರಂಗನ ಪವಿತ್ರ ಕ್ಷೇತ್ರಗಳ ದಟ್ಟವಾದ ಅರಣ್ಯದಲ್ಲಿ ವಾಸಿಸುವ ಆನೆಗಳು ಅವುಗಳ ದಂತಗಳು, ಅವರ ಖಜಾನೆಗೆ ಒಳ್ಳೆಯ ವರಮಾನದ ಆಸರೆಗಳಾಗಿದ್ದವುಗಳೆಂದು ಊಹಿಸಬಹುದಾಗಿದೆ.

ಇಲ್ಲಿ ಹರಿಯುತ್ತಿರುವ ಹೊನ್ನು ಹೊಳೆ 'ಸುವರ್ಣಾವತಿ' ದಕ್ಷಿಣ ಉತ್ತರವಾಹಿನಿಯಿಂದಲೂ ತನ್ನ ಎರಡು ಪಕ್ಕ ದಡದ, ಮೈದಾನವನ್ನು ಫಲವತ್ತಾಗಿಯೂ ತೆಂಗು, ಅಡಿಕೆ, ವೀಳ್ಳೆದೆಲೆ, ಬಾಳೆ ತೋಟಗಳಿಂದಲೂ, ಕಬ್ಬು, ಭತ್ತ, ರಾಗಿ ಬೆಳೆಗಳಿಂದ ಫಲ ಸಮೃದ್ಧಿ ಹೊಂದಿ ಜನಜೀವನವನ್ನು ಸಮೃದ್ಧಿಪಡಿಸಿ ಕಾವೇರಿ ನದಿಗೆ ಉಪನದಿಯಾಗಿ ಹರಿಯುತ್ತಿದೆ. ಈ ಸುವರ್ಣಾವತಿ ನದಿಗೆ ಪುರಾಣ ಪ್ರಸಿದ್ಧ ಕಥೆ ಇದೆ. ಇಲ್ಲಿನ ಭೌಗೋಳಿಕ ಪರಿಸರಕ್ಕೂ ಪುರಾಣದಲ್ಲಿರುವ ವಿವರಣೆಗಳಿಗೂ ಪೂರ್ಣವಾದ ಸಾಮ್ಯತೆ ಕಂಡುಬರುತ್ತದೆ.

ಶ್ರೀ ಮದ್ರಾಮಾಯಾಣದಲ್ಲಿ ಉಲ್ಲೇಖವಿರುವಂತೆ ಈ ಪ್ರದೇಶವು ದಂಡಕಾರಣ್ಯ, ಗಜಾರಣ್ಯ ಹಾಗೂ ಚಂಪಕಾರಣ್ಯವೆಂದು ವರ್ಣಿಸಲ್ಪಟ್ಟಿದೆ. ರಾಮಾಯಣದಲ್ಲಿ ಸೀತೆ ಅಪಹರಣಕ್ಕೆ ಸಹಾಯಕನಾದ ಮಾರೀಚನು, ಶ್ರೀರಾಮನ ಬಾಣಗಳಿಂದ ಸಂಹರಿಸಲ್ಪಟ್ಟಾಗ! ಕ್ಷಮಾಶೀಲನಾದ ರಾಮನು ಮಾರೀಚನಿಗೆ ಮುಕ್ತಿ ನೀಡಲು ಒಪ್ಪಿ ವರ ಕೇಳುವಂತೆ ತಿಳಿಸುತ್ತಾನೆ. ಅದಕ್ಕೆ ಮಾರೀಚನು ತನ್ನ ಹೊಟ್ಟೆಯಿಂದ ಹರಿಯುತ್ತಿರುವ ರಕ್ತಪ್ರವಾಹವು ದಕ್ಷಿಣೋತ್ತರ ದಿಕ್ಕಿಗೆ ನದಿಗಳಾಗಿ ಹರಿಯಲಿ, ದಕ್ಷಿಣಕ್ಕೆ ಹರಿದ ನದಿಯಲ್ಲಿ ಎಂತಹ ಪಾಪ ಮಾಡದವರೂ ಸ್ನಾನ ಮಾಡುತ್ತಾರೋ ಅವರ 'ಭವ' ಪಾಪ ಪರಿಹಾರವಾಗಲಿ, ಅದೇ 'ಭವಹಾರಿ' ಈಗಿನ "ಭವಾನಿ ನದಿ" ಉತ್ತರಕ್ಕೆ ಹರಿದ ರಕ್ತಪ್ರವಾಹವು ನದಿಯಾಗಿ ಹರಿದು ತನ್ನ ಇಕ್ಕೆಲಗಳಲ್ಲಿಯೂ ಸಸ್ಯ ಸಮೃದ್ಧವಾದ ಸುವರ್ಣಭೂಮಿಯಾಗಿರಲಿ, ಇದರ ಫಲವೇ ಉತ್ತರವಾಹಿನಿಯು ಸುವರ್ಣಾವತಿ ನದಿಯಾಗಿ, ಈಗ ಹೊನ್ನುಹೊಳೆಯೆಂದು ಪ್ರಸಿದ್ಧವಾಗಿದೆ.

ಇಂತಹ ನದಿ ಪಾತ್ರದ ಪ್ರದೇಶವನ್ನು ದಿವಾನ್ ಪೂರ್ಣಯ್ಯನವರು ಜಹಗಿರ್ ಆಗಿ ಪಡೆದಾಗ ಪಕ್ಕಾ ಗ್ರಾಮ ಮತ್ತು ದಾಖಲೆ ಗ್ರಾಮಗಳೆಂದು ೩೩ ಹಳ್ಳಿಗಳಿದ್ದವು. ಪ್ರತಿ ಗ್ರಾಮಕ್ಕೆ ಜನ ಜಾನುವಾರು ಮತ್ತು ಕೃಷಿಗಾಗಿ ಕೆರೆಗಳ ಪುನರ್ನಿಮಾಣ ಹಾಗೂ ದುರಸ್ಥಿ ಕಾರ್ಯಗಳು ನಡೆದವು. ಇಂತಹ ಪೂರ್ಣಯ್ಯನವರ ಜಹಗೀರ್ ತಾಲ್ಲೂಕಿನ ಕೆರೆಗಳ ಇತಿಹಾಸ ಅಧ್ಯಯನ ಮಾಡಲು ಗ್ರಾಮಗಳು ಮತ್ತು ಆ

ಗ್ರಾಮಗಳಿಗೆ ಸೇರಿದ ಕೆರೆಗಳು ಅದರ ನೀರಿನ ಆಶ್ರಯಗಳು ಯಾವುವು, ಕೃಷಿಗಾಗಿ ಬಳಸುವ ಕೆರೆಗಳು ಮತ್ತು ಕುಡಿಯುವ ನೀರಿಗಾಗಿ ಮತ್ತು ದನಕರುಗಳನ್ನು ತೊಳೆಯುವ ಸ್ನಾನ ಮತ್ತು ಶೌಚಕ್ಕಾಗಿ ಉಪಯೋಗಿಸುತ್ತಿದ್ದ ಕೆರೆಗಳ ವಿಚಾರ ಈ ರೀತಿಯಿದೆ.

೧. ಯಳಂದೂರು ಕೆರೆ ಇದು ವಿಸ್ತೀರ್ಣ ೫೮೫ ಎಕರೆ. ಈ ಕೆರೆಗೆ ನೀರು ಒದಗುವ ಮೂಲ- ಅಂಬಳೆ ಗ್ರಾಮದ ಬಳಿ ಸುವರ್ಣಾವತಿಗೆ ಅಡ್ಡಗಟ್ಟೆ ಮತ್ತು ಕಾಲುವೆಯಿಂದ ಒದಗಿಸಲಾಗಿದೆ.

೨. ಕಂದಹಳ್ಳಿ ಅವಾಲ್ ೧ ರ ಕಂದಹಳ್ಳಿ ಕೆರೆ, ಇದರ ವಿಸ್ತೀರ್ಣ ೧೨೭ ಇದಕ್ಕೆ ನೀರು ಕಣ್ಣೇಗಾಲದ ಬಳಿ ಪಿಕಪ್ ಕಾಲುವೆಯಿಂದ.

೩. ಮೆಳ್ಳಹಳ್ಳಿ ಕೆರೆ, ವಿಸ್ತೀರ್ಣ ೩೫ ಇದಕ್ಕೆ ಮಳೆ ಆಶ್ರಯ

೪. ದುಗ್ಗಹಟ್ಟಿಕೆರೆ ವಿಸ್ತೀರ್ಣ ೪೯- ಕಣ್ಣೇಗಾಲದ ಕಾಲುವೆ

೫. ಹೊನ್ನೂರು ಕೆರೆ ವಿಸ್ತೀರ್ಣ, ೧೭೫ ಕಣ್ಣೇಗಾಲದ ಪಿಕಪ್ ಕಾಲುವೆ

೬. ಯರಿಯೂರು ಕೆರೆ ವಿಸ್ತೀರ್ಣ ೭೨೬. ಸುವರ್ಣಾವತಿ ನದಿಗೆ ಅಡ್ಡಗಟ್ಟೆ ಕಾಲುವೆಯಿಂದ ನೀರು.

೭. ಮದ್ದೂರು ಕೆರೆ - ವಿಸ್ತೀರ್ಣ, ೯೮೬ ಯಳಂದೂರ ಬಳಿ ಸುವರ್ಣಾವತಿಗೆ ಅಡ್ಡಗಟ್ಟೆ ಕಾಲುವೆಯಿಂದ

೮. ಅಗರವ ಕೆರೆ ವಿಸ್ತೀರ್ಣ ೧೮೩೬ ಎಕರೆ ಇದಕ್ಕೆ ಸುವರ್ಣಾವತಿ ನದಿಗೆ ಗಣಿಗನೂರು ಬಳಿ ಅಡ್ಡಗಟ್ಟೆ ಕಾಲುವೆಯಿಂದ ನೀರು ಒದಗಿಸಲಾಗಿದೆ.

೯. ಮಾಂಬಳ್ಳಿಕೆರೆ ಇದು ಕುಡಿಯುವ ನೀರು ದನಕರುಗಳಿಗೆ ಬಟ್ಟೆ ಒಗೆಯಲು ಇತ್ಯಾದಿಗಳಿಗೆ

೧೦. ಕಿನಕಹಳ್ಳಿ ಕೆರೆ

೧೧. ಕಟ್ನವಾಡಿ, ಬಸವಾಪುರ

೧೨. ಮದ್ದೂರು ಕೆರೆ- ಮದ್ದೂರು ಕೆರೆ ಹಾಗೂ ಕೋಡಿ ಮತ್ತು ಮಳೆನೀರು

೧೩. ಕೆಸ್ತೂರು ದೊಡ್ಡಕೆರೆ ವಿಸ್ತೀರ್ಣ ೧೭೫ ಎಕರೆ ಇದಕ್ಕೆ ಚಾಮರಾಜನಗರ ತಾಲ್ಲೂಕು ಕಣ್ಣೆಗಾಲ ಪಿಕ್‌ಅಪ್ ಸುವರ್ಣಾವತಿ ನದಿಗೆ ಅಡ್ಡಗಟ್ಟೆ ೬. ಕೀ.ಮಿ ಕಾಲುವೆ.

**ಯಳಂದೂರಿನ ಜಾನಪದರ ಆಟಗಳು**

ಯಳಂದೂರಿನ ಜನರು ದೈಹಿಕವಾಗಿ, ಮಾನಸಿಕವಾಗಿ ನೆಮ್ಮದಿ ಪಡೆಯಲು ಕೆಲವು ಆಟಗಳನ್ನು ಮಕ್ಕಳೊಂದಿಗೆ ಕೂಡಿ ದೊಡ್ಡವರೂ ಆಡುತ್ತಿದ್ದರು. ಅದರಲ್ಲಿ ಚಿಣ್ಣಿಕೋಲಾಟ, ಲಗ್ಗೆಚೆಂಡಾಟ, ಕಬ್ಬಡಿ ಆಟ, ಮರಕೋತಿ ಆಟ, ಕಡ್ಡಿಆಟ, ಗಟ್ಟಮನೆಯಾಟ, ಅಳ್ಳುಗುಳ್ಳಿ ಮನೆಯಾಟ, ಕಣ್ಣಾಮುಚ್ಚೆ ಕಾಡೇ ಗೂಡೆ ಆಟ,ಗೋಲಿ ಆಟ ಮುಂತಾದವು. ಈ ಆಟಗಳು ದೇಹದ ಬಲ, ಶಕ್ತಿ ಇವುಗಳ ಆಧಾರವಾಗಿತ್ತು. ಸಾಮಾನ್ಯವಾಗಿ ರೈತಾಪಿ ಜನಗಳು ತಮ್ಮ ಗದ್ದೆ, ಹೊಲ, ತೋಟ– ಕೂಲಿಗೆಲಸ ಮುಂತಾದವುಗಳ ಕಡೆಗೆ ಗಮನ ಹರಿಸುತ್ತಿದ್ದರು. ಈ ಗಮನವೇ ಅವರಲ್ಲಿ ಜಾಸ್ತಿಯಾಗಿತ್ತು. ಹಾಗಾಗಿ ಅವರುಗಳು ಇಂತಹ ಆಟಗಳಿಗೆ ಭಾಗಿಯಾಗುವುದು ಕಡಿಮೆಯಾಗಿತ್ತು.

ಹಿಂದೆ ಮಕ್ಕಳು 'ಕಣ್ಣಾಮುಚ್ಚೆ ಕಾಡೇ ಗೂಡೆ' ಎನ್ನುವ ಆಟವನ್ನು ಆಡುತ್ತಿದ್ದರು. ಇದರಲ್ಲಿ ದೊಡ್ಡವರೊಬ್ಬರು ಸೋತ ಮಗುವಿನ ಕಣ್ಣನ್ನು ಮುಚ್ಚಿ "ಕಣ್ಣಾ ಮುಚ್ಚೆ ಕಾಡೇ ಗೂಡೇ ಉದ್ದಿನ ಮೂಟೆ ಉರುಳೆ ಹೋಯಿತು ನಮ್ಮಯ ಹಕ್ಕಿ ಬಿಟ್ಟೆ ಬಟ್ಟೇ, ಅವರ ಬಿಟ್ಟು ಇವರಬಿಟ್ಟು ಅವರು ಯಾರು" ಎಂದು ಕೇಳುತ್ತಾ ಎಲ್ಲಾ ಮಕ್ಕಳನ್ನು ಅಡಗಿಕೊಳ್ಳಲು ಹೇಳುವುದು. ನಂತರ ಮುಚ್ಚಿದ ಕಣ್ಣನ್ನು ಬಿಡುವುದು. ಆ ಮಗು ಅಡಗಿದ ಮಕ್ಕಳನ್ನು ಗುರುತಿಸಬೇಕು. ಇಲ್ಲದಿದ್ದರೆ ಸೋತ ಮಗು ಸೋಲನ್ನು ಒಪ್ಪಿಕೊಂಡು ಮತ್ತೆ ಮೇಲಿನಂತೆ ಮಾಡಬೇಕು.

ಮನೆಯ ಸುತ್ತಮುತ್ತ ಮಕ್ಕಳು ಸೇರಿ 'ಲಗೋರಿ' ಎಂಬ ಆಟವನ್ನು ಆಡುತ್ತಿದ್ದರು. ಇದರಲ್ಲಿ ಆರು ಅಥವಾ ಏಳು ಚಪ್ಪಟೆಯ ಕಲ್ಲುಗಳನ್ನು ಒಂದರಮೇಲೊಂದು ಜೋಡಿಸಿಟ್ಟು ಎದುರು ಬದುರಾಗಿ ಎರಡು ಗುಂಪು ಮಕ್ಕಳು ನಿಲ್ಲುವವು ಒಂದು ಗುಂಪಿನ ಮಕ್ಕಳು ಚೆಂಡನ್ನು ಎಸೆಯುತ್ತಾ ಜೋಡಿಸಿದ ಕಲ್ಲನ್ನು ಬೀಳಿಸಿದರೆ ಅವರಿಗೆ ಅಂಕಗಳು ಬರುತ್ತಿತ್ತು. ಹೀಗೆ ಎಸೆಯುವಾಗ ಎದುರು ಗುಂಪಿನವರು ಚೆಂಡನ್ನು ಹಿಡಿದು ಬಿಟ್ಟರೆ ಆಗ ಚೆಂಡು ಅವರ ಪಾಲಿಗೆ ಹೋಗುತ್ತಿತ್ತು. ಮತ್ತೆ ಆ ಗುಂಪಿನವರು ಚೆಂಡನ್ನು ಎಸೆಯುವ ಸರದಿಯನ್ನು ಪಡೆಯುತ್ತಿದ್ದರು.

**ಕಡ್ಡಿ ಆಟ :** ಇದಕ್ಕೆ ಆಟಗಾರ ಮಕ್ಕಳೆಲ್ಲಾ ಕಡ್ಡಿಗಳನ್ನು ಇಟ್ಟುಕೊಂಡು ಸೋತ ಮಗುವಿನ ಕಡ್ಡಿಯನ್ನು ತಮ್ಮ ಕಡ್ಡಿಯಿಂದ ದೂರಕ್ಕೆ ತಳ್ಳುತ್ತಾರೆ. ಹೀಗೆ ತಳ್ಳುವಾಗ ಸೋತ ವ್ಯಕ್ತಿ ಯಾರನ್ನಾದರೂ ಮುಟ್ಟಿದರೆ ಆಗ ಸೋತ ವ್ಯಕ್ತಿ ಸೋಲಿನಿಂದ ಮುಕ್ತಿ ಪಡೆದು ಕಡ್ಡಿಯನ್ನು ಎಳೆದುಕೊಂಡು ಹೋದ ಸ್ಥಳದಿಂದ ಮೂಲ ಸ್ಥಳಕ್ಕೆ ಕುಂಟುತ್ತಾ ಬರಬೇಕು. ಇದನ್ನು ನೋಡಿ ಎಲ್ಲರೂ ನಗುತ್ತಿದ್ದರು ಇದೊಂದು ಮೋಜಿನ ಆಟವಾಗಿತ್ತು.

**ಗಟ್ಟಮನೆಯಾಟ** : ಇದರಲ್ಲಿ ಐದು ಮನೆ ಅಥವಾ ಏಳು ಮನೆಯಾಟ ಎಂಬ ಎರಡು ಬಗೆಗಳಿವೆ. ಇದಕ್ಕೆ ನಾಲ್ಕು ಜನ ಅಥವಾ ಇಬ್ಬರು ಇರಬೇಕಿತ್ತು. ಈ ಆಟವನ್ನು ಮನೆಯ ಹೆಂಗಸರು ಮತ್ತು ಮಕ್ಕಳು ಮನೆಯಲ್ಲಿಯೇ ಆಡುತ್ತಿದ್ದರು. ಇದಕ್ಕೆ ಬೇಕಾಗುವ ಕವಡೆಯನ್ನು ಹುಣಸೆ ಪಚ್ಚಿಯಿಂದಲೇ ಮಾಡಿಕೊಳ್ಳುತ್ತಿದ್ದರು. ಕೆಲವರು ಇದಕ್ಕೆ ಪಂದ್ಯವನ್ನು ಕಟ್ಟಿಕೊಂಡು ಆಟವಾಡುತ್ತಿದ್ದರು. ಇದರ ಜೊತೆಗೆ ಅಳಿಗುಳಿ ಮನೆಯಾಟವನ್ನು ಬಹಳ ಸಂತೋಷದಿಂದ ಆಡುತ್ತಿದ್ದರು.

**ಕುಂಟೇಬಿಲ್ಲಿ ಆಟ** : ಇದಕ್ಕೆ ಇಬ್ಬರು ಅಥವಾ ಅದಕ್ಕಿಂತ ಹೆಚ್ಚಿನ ಮಕ್ಕಳು ಆಟವಾಡಬಹುದು. ಇಲ್ಲಿ ನಾಲ್ಕು, ಆರು ಅಥವಾ ಎಂಟು ಮನೆಯನ್ನು ಬರೆದು, ಒಂದು ಚಪ್ಪಟೆ ಕಲ್ಲನ್ನು ತೆಗೆದುಕೊಂಡು ಮಣ್ಣಿನಲ್ಲಿ ಬರೆದ ಒಂದು ಮನೆಗೆ ಆ ಕಲ್ಲನ್ನು ಎಸೆದು ಎಲ್ಲಾ ಮನೆಗೂ ಕುಂಟುತ್ತಾ ಬಂದು ಆ ಪಚ್ಚಿಯನ್ನು ತಳ್ಳಬೇಕು ನಂತರ ಕೈ ಮೇಲೆ ಮತ್ತು ತಲೆಯ ಮೇಲೆ ಪಚ್ಚಿ ಇಟ್ಟುಕೊಂಡು ಎಲ್ಲಾ ಮನೆಯನ್ನು ಕುಂಟುತ್ತಾ ಬರಬೇಕು. ಕೊನೆಗೆ ಕಣ್ಣು ಮುಚ್ಚಿ ಎಲ್ಲಾ ಮನೆಯನ್ನು ದಾಟುತ್ತಾ ಬರಬೇಕು. ಹೀಗೆ ಬರುವಾಗ ಗೆರೆಯನ್ನು ತುಳಿದರೆ ಅವರು ಮತ್ತೆ ಆಡಬೇಕಾಗುತ್ತದೆ. ಇಲ್ಲದಿದ್ದರೆ ಹೀಗೆ ಮುಂದುವರಿದು ಮೊದಲೇ ಎಸೆದ ಪಚ್ಚಿಯನ್ನು ತುಳಿದು ಹಿಂದಿನ ಮನೆಯಿಂದ ಪಚ್ಚಿಯನ್ನು ಒಂದು ಮನೆಗೆ ಎಸೆದರೆ ಆಗ ಅವರಿಗೆ ಆ ಮನೆ ವಶವಾಗುತ್ತದೆ.

ಹೀಗೆ ಯಳಂದೂರಿನ ಜನರು ನಾನಾ ರೀತಿಯ ಆಟವನ್ನು ಆಡಿ ಸಂತೋಷ ಪಡುತ್ತಿದ್ದರು.

ಆದರೆ ಇತ್ತೀಚೆಗೆ ನಾಗರಿಕತೆಗೆ ಮಾರುಹೋಗಿ ಇಲ್ಲಿಯ ಜನರು ಮನೆಯಲ್ಲಿಯೇ ಟಿ.ವಿ. ನೋಡುತ್ತಾ ಕಾಲ ಕಳೆಯುತ್ತಾರೆಯೇ ಹೊರತು ಆಟವನ್ನು ಆಡಲು ಇಷ್ಟಪಡುವುದಿಲ್ಲ. ಇಂದಿನ ಮಕ್ಕಳಿಗೂ ಮನೆಪಾಠ, ಮನೆಕೆಲಸ ಮುಂತಾದವು ಇರುವುದರಿಂದ ಅವರು ಆಟವಾಡಲು ಸಾಧ್ಯವಾಗುತ್ತಿಲ್ಲ. ಅಷ್ಟೇ ಅಲ್ಲದೆ ಜನ ಸಂಖ್ಯೆ ಹೆಚ್ಚಾಗಿ ಮನೆಗಳು ಹೆಚ್ಚಾಗಿರುವುದುರಿಂದ ಒಂದು ಉದ್ಯಾನವನ ಅಥವಾ ವಿಶಾಲವಾದ ಸ್ಥಳವೇ ಇಲ್ಲ. ಆದ್ದರಿಂದ ಮಕ್ಕಳು ಸಂತೋಷದಿಂದ ಆಟವಾಡಲು ಸಾಧ್ಯವಾಗುತ್ತಿಲ್ಲ. ಆದರೂ ಕೆಲವು ಮಕ್ಕಳು ಸಿಕ್ಕ ಸಿಕ್ಕ ಸ್ಥಳಗಳಲ್ಲಿ ಕ್ರಿಕೆಟ್ ಆಟವನ್ನು ಆಡುತ್ತಿರುತ್ತಾರೆ.

# ಅಧ್ಯಾಯ – ೬

## ಜಾನಪದೀಯ ಸ್ಥಿತ್ಯಂತರಗಳು

ಯಳಂದೂರು ಚಾಮರಾಜನಗರ ಜಿಲ್ಲೆಗೆ ಸೇರಿದ ಒಂದು ತಾಲ್ಲೂಕಾಗಿದೆ. ಇದು ಇನ್ನೂ ನಗರಸಭಾ ವ್ಯಾಪ್ತಿಗೆ ಸೇರದೆ ಪುರಸಭಾ ಆಡಳಿತ ಕೇಂದ್ರವಾಗಿರುವ ಈ ಸ್ಥಳವನ್ನು ಮೈಸೂರು ಒಡೆಯರು ದಿವಾನ್ ಪೂರ್ಣಯ್ಯನವರಿಗೆ ಜಹಗೀರ್ ಆಗಿಕೊಟ್ಟಿದ್ದು ಈಗ ಇತಿಹಾಸ, ಯಳಂದೂರು ಹದಿಬದೆಯ ಧರ್ಮದ ಪ್ರಾಚೀನ ಲೇಖಕಿ ಸಂಚಿ ಹೊನ್ನಮ್ಮನ ನೆಲೆ. ಜನಪದ ಮಹಾಕಾವ್ಯದ ಸಾಂಸ್ಕೃತಿಕ ವೀರರಾದ ಮಲೆಯ ಮಾದೇಶ್ವರ, ಮಂಟೇಸ್ವಾಮಿಯವರು ಮತ್ತು ಅವರ ಶಿಷ್ವ ಪರಂಪರೆ ನಡೆದಾಡಿರುವ ಜಾಗ. ಈ ನಾಯಕರ ನೂರಾರು ಶಿಷ್ಯ ಕೋಟಿಗಳು ಈಗಲೂ ಈ ಊರಿನಲ್ಲಿ ನೆಲೆಸಿದ್ದಾರೆ. ಬಿಳಿಗಿರಿ ರಂಗನ ಬೆಟ್ಟದ ಬಿಳಿಗಿರಿ ರಂಗಯ್ಯ ಯಳಂದೂರು ಗ್ರಾಮದ ಬಹುತೇಕ ಮನೆತನಗಳ ಆರಾಧ್ಯ ದೈವ. ಹೀಗೆ ಯಳಂದೂರು ಇಡೀ ರಾಜ್ಯದಲ್ಲಿ ಅತ್ಯಂತ ಚಿಕ್ಕ ತಾಲ್ಲೂಕು ಕೇಂದ್ರವಾಗಿದ್ದರೂ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಮತ್ತು ಸಾಹಿತ್ಯಿಕವಾಗಿ, ಭಾಷಿಕವಾಗಿ ಹಾಗೂ ಜಾನಪದೀಯವಾಗಿ ಹೆಚ್ಚು ಶ್ರೀಮಂತವಾಗಿದೆ.

ಯಾವುದೇ ಒಂದು ಊರು, ಕೇರಿ, ಗ್ರಾಮ ದಿನದಿಂದ ದಿನಕ್ಕೆ ಬದಲಾಗುತ್ತಿದ್ದಂತೆ ಅದರ ಆಧುನಿಕತೆಯ ಮುಖ ಗೋಚರವಾಗುತ್ತ ಹೋಗುತ್ತದೆ. ಬದಲಾದ ಆಧುನಿಕ ತಂತ್ರಜ್ಞಾನ ಮತ್ತು ವಿದ್ಯಮಾನಗಳ ಸಂದರ್ಭದಲ್ಲಿ ಯಳಂದೂರು ಹೊಸ ರೂಪ ಪಡೆಯುತ್ತಿದೆ. ಈ ಊರು ವಿಸ್ತೀರ್ಣದಲ್ಲಿ ದೊಡ್ಡದಲ್ಲದಿದ್ದರೂ ಇರುವಂಥ ಜಾಗದಲ್ಲೇ ಹೊಸ ಸಮಾಜಕ್ಕೆ, ಬದಲಾದ ವ್ಯವಸ್ಥೆಗೆ ಹೊಂದಿಕೊಳ್ಳುತ್ತಿರುವುದು ಸ್ಪಷ್ಟ.

**ಸೋಬಾನೆ ಗೀತೆಗಳು:** ಹಿಂದೆ ಮದುವೆಯ ಪ್ರತಿಶಾಸ್ತ್ರದಲ್ಲೂ ಹಲವು ಹೆಂಗಳೆಯರು ಒಟ್ಟಾಗಿ ಸೇರಿ ಮಂಗಳಕರ ಗೀತೆಯನ್ನು ಹಾಡುತ್ತಿದ್ದರು. ಇದು ಅಲ್ಲಿಯ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಬದಲಾಗುತ್ತಿದ್ದವು. ಆದರೆ ಇಂದು ನಾಗರೀಕತೆಯಿಂದಾಗಿ ಸೋಬಾನೆ ಗೀತೆಗಳನ್ನು ಹಾಡುವವರೆ ಮರೆಮಾಡಿಕೊಂಡಿದ್ದಾರೆ. ಏಕೆಂದರೆ ಇಂದು ವಿದ್ಯುತ್ ಸೌಲಭ್ಯ ಪ್ರತಿಮನೆಯಲ್ಲೂ ಇರುತ್ತದೆ. ಹಾಗಾಗಿ ವಿದ್ಯುತ್ತಿನ ಸಹಾಯದಿಂದ ಹಾಡುಗಳನ್ನು ಮದುವೆಯ ಮನೆಯಲ್ಲಿ ಸಿಡಿ, ಡಿವಿಡಿಗಳ ಮೂಲಕ ತಮಗೆ ಬೇಕಾದನ್ನು ಹಾಕಿ ಮನರಂಜನೆಯನ್ನು ಪಡೆದುಕೊಳ್ಳುತ್ತಾರೆ. ಇನ್ನು ಕೆಲವರು ಮದುವೆಯನ್ನು ಛತ್ರದಲ್ಲಿ ಮಾಡಿ ಅಲ್ಲಿಗೆ ನುರಿತ ಹಾಡುಗಾರರನ್ನು ದುಡ್ಡುಕೊಟ್ಟು

ಕರೆಸಿಕೊಳ್ಳುತ್ತಿದ್ದಾರೆ. ಹೀಗೆ ನಾಗರೀಕತೆಯಿಂದ ಸೋಬಾನೆ ಗೀತೆ ಮತ್ತು ಸೋಬಾನೆ ಹಾಡುವವರನ್ನು ಮರೆಯುತ್ತಿದ್ದಾರೆ ಎಂದು ಕೆಲವು ಸಾರಿ ಅನುಮಾನ ಮೂಡುತ್ತದೆ.

ಜಾನಪದ ಅಂಗವಾದ ಸೋಬಾನೆ ಗೀತೆಗಳನ್ನು ಉಳಿಸಿಕೊಳ್ಳಲು ಸಂಘ, ಸಂಸ್ಥೆಗಳು ಪ್ರಯತ್ನಿಸಬೇಕು. ಪಟ್ಟಣದ ಜನರು ಸೋಬಾನೆ ಹಾಡುವರನ್ನು ಒಟ್ಟುಗೂಡಿಸಿ ಅವರಿಂದ ಹಾಡನ್ನು ಹೇಳಿಸಿ ಅದನ್ನು ಧ್ವನಿಮುದ್ರಣ ಮಾಡಿಕೊಳ್ಳಬೇಕು. ಇದರಿಂದ ಅಲ್ಪಪ್ರಮಾಣದಲ್ಲಿ ಉಳಿಸಿಕೊಳ್ಳಲು ಸಾಧ್ಯವಾಗಬಹುದು.

**ಜನಪದ ಕಥೆ**

ಕಥೆ ಹೇಳುವ ಮತ್ತು ಕೇಳುವ ರೀತಿ ತುಂಬ ಹಳೆಯದು. ಕಥೆ ಹೇಳುವ ಪ್ರವೃತ್ತಿ ಮಾನವ ಸಮಾಜದಷ್ಟೇ ಪ್ರಾಚೀನವಾದರೂ ಮಾನವ ಅದನ್ನು ಒಂದು ಕಲೆಯಾಗಿ ಬೆಳೆಸಿಕೊಂಡಿದ್ದು ವಿಶೇಷ. ಮನೋರಂಜನೆ ಈ ಕಲೆಯ ಗುರಿಯಾದರೂ ಕೆಲಸದ ಸಮಯದಲ್ಲಿ ಕೆಲಸದ ಶ್ರಮವನ್ನು ಮರೆಯಲು ಇದು ಒಂದು ಸಾಧನವೂ ಹೌದು. ಮಕ್ಕಳನ್ನು ಮಲಗಿಸಲು ಕೂಡ ಇದರ ಬಳಕೆಯಾಗುತ್ತದೆ. ರಾಜಮನೆತನಗಳಲ್ಲಿ ವೃತ್ತಿ ಕಥೆಗಾರರನ್ನು ನೇಮಿಸಿಕೊಂಡಿದ್ದುದಕ್ಕೆ ಆಧಾರಗಳಿವೆ. ಒಟ್ಟಿನಲ್ಲಿ ಕಥೆ ಹೇಳುವ ಮತ್ತು ಕೇಳುವ ಈ ಕಲೆ ಇತಿಹಾಸಕ್ಕಿಂತಲೂ ಪ್ರಾಚೀನ ಎನ್ನಬಹುದು.

ಆದರೆ ಇಂದು ಇದರ ಪ್ರವೃತ್ತಿ ಕಡಿಮೆಯಾಗುತ್ತಾ ಬಂದಿದೆ. ಕಾರಣ ಮಕ್ಕಳಿಗೆ ದೂರದರ್ಶನದಲ್ಲಿ ವ್ಯಾಮೋಹ ಉಂಟಾಗುತ್ತಿದೆ. ಜೊತೆಗೆ ಶಾಲೆಯಿಂದ ಬಂದ ಮಕ್ಕಳು ಮನೆಪಾಠಕ್ಕೆ ಹೋಗಬೇಕು. ಅನಂತರ ಮನೆಕೆಲಸ ಮಾಡಿ ಆಯಾಸದಿಂದ ಮಲಗಿಬಿಡುತ್ತವೆ. ಇದರಿಂದ ಜನಪದ ಕಥೆಗಳು ಮೌಖಿಕವಾಗಿ ಉಳಿಯದೆ ಕೆಲವು ಕಥೆಗಳು ಸಾಹಿತ್ಯಕವಾಗಿ ಉಳಿದುಕೊಂಡಿದೆ.

**ರಂಗೋಲಿ**

ಈ ಭಾಗದ ಜನಪದರು ಹಿಂದೆ ಪ್ರತಿನಿತ್ಯ ಮನೆಮುಂದೆ ಸಗಣಿಯಿಂದ ಸಾರಿಸಿ ರಂಗೋಲಿಯನ್ನು ತುಂಬಾ ದೊಡ್ಡದಾಗಿ ಮತ್ತು ಅಂದವಾಗಿ ಬಿಡುತ್ತಿದ್ದರು. ಜನಪದರಲ್ಲಿ ರಂಗೋಲಿಗೆ ದೇವರ ಸ್ಥಾನವನ್ನು ಕೊಟ್ಟು ಅದನ್ನು ತುಳಿಯಬಾರದೆಂಬ ನಂಬಿಕೆಯಿಟ್ಟುಕೊಂಡಿದ್ದರು. ಇವರು ಚುಕ್ಕೆ ರಂಗೋಲಿಯನ್ನು ಹಾಕಬಾರದೆಂಬ ನಂಬಿಕೆಯಿಂದ ಹೆಚ್ಚಾಗಿ ಎಳೆಯ ರಂಗೋಲಿಯನ್ನು ಹಾಕುತ್ತಿದ್ದರು.

ಆದರೆ ಇಂದು ಕೆಲವು ಸಂಪ್ರದಾಯಸ್ಥ ಕುಟುಂಬದವರು ಮಾತ್ರ ರಂಗೋಲಿಯನ್ನು ಬಿಡಿಸುತ್ತಾರೆ. ಅವರು ರಂಗೋಲಿ ಬಿಡಿಸಿದರೂ ಚಿಕ್ಕಚಿಕ್ಕದನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಕಾರಣ ಸಮಯದ ಅಭಾವ ಮತ್ತು ವಾಹನ ಸೌಲಭ್ಯ

ಹೆಚ್ಚಾಗಿ ಇರುವುದರಿಂದ ಜೊತೆಗೆ ಪಾದಚಾರಿಗಳ ಹೆಚ್ಚಿನ ಸಂಚಾರದಿಂದ ರಂಗೋಲಿ ಹಾಕಿರುವುದು ಕೆಲವೆ ಸಮಯದಲ್ಲಿ ಅಳಿಸಿಹೋಗುತ್ತದೆ. ಇದರಿಂದ ಕೆಲವರು ಅಳಿಸದ ಬಣ್ಣದಿಂದ ಬಿಡಿಸಿರುತ್ತಾರೆ.

ಇಂತಹ ಎಲ್ಲ ಕಾರಣದಿಂದ ನಾಗರಿಕರು ರಂಗೋಲಿಯ ಮೇಲೆ ತಮ್ಮ ಒಲವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದಾರೆ. ಇನ್ನೂ ಕೆಲವು ವರ್ಷಗಳ ನಂತರ ಮರೆಮಾಚಬಹುದೆಂದು ಕೆಲವರು ಪಂದ್ಯವನ್ನು ಕಟ್ಟಿ ಅದರಿಂದ ಉಳಿಸುವ ಪ್ರಯತ್ನ ಮಾಡುತ್ತಿದ್ದಾರೆ.

ಹಿಂದೆ ಜನಪದರು ದೈಹಿಕವಾಗಿ ಮತ್ತು ಮಾನಸಿಕವಾಗಿ ನೆಮ್ಮದಿ ಪಡೆಯಲು ಕೆಲವು ಆಟಗಳನ್ನು ಆಡುತ್ತಿದ್ದರು. ಇದರಿಂದ ಆಟಗಾರರ ಬುದ್ಧಿವಂತಿಕೆ ಮತ್ತು ಶ್ರಮವನ್ನು ಅಳೆಯಬಹುದಾಗಿತ್ತು. ಆದರೆ ಇಂದು ಮಕ್ಕಳಲ್ಲಾಗಲಿ ಅಥವಾ ದೊಡ್ಡವರಲ್ಲಾಗಲಿ ಆಟದ ಮೇಲಿನ ಆಸಕ್ತಿ ಕಡಿಮೆಯಾಗುತ್ತಾ ಬಂದಿದೆ. ಇದಕ್ಕೆ ಕಾರಣ ಸಮಯದ ಅಭಾವವೇ ಆಗಿದೆ.

ಮಕ್ಕಳು ಶಾಲೆಯಿಂದ ಬಂದ ಮೇಲೆ ಮನೆಪಾಠ, ಮನೆ ಕೆಲಸದ ಒತ್ತಡವಿರುತ್ತದೆ. ಉಳಿದ ಸಮಯದಲ್ಲಿ ಮನರಂಜನೆಗಾಗಿ ದೂರದರ್ಶನವನ್ನು ನೋಡುತ್ತಾರೆ. ಹೀಗಾಗಿ ಮಕ್ಕಳು ಆಟವನ್ನೇ ಮರೆಯುತ್ತಾ ಬಂದಿದ್ದಾರೆ. ಕೆಲವು ಆಟಗಳನ್ನು ಉಳಿಸಿಕೊಳ್ಳಲು ಶಾಲೆಗಳು ಒಂದು ನಿಗದಿ ಸಮಯದಲ್ಲಿ ಜನಪದರ ಆಟಗಳ ಪರಿಚಯವನ್ನು ಮಾಡಿಕೊಳ್ಳಬೇಕು. ಇದರಿಂದ ಶಾಲೆಯಲ್ಲಾದರೂ ಆಟವಾಡುವ ಅವಕಾಶ ದೊರೆಯಬಹುದು.

ಜನಪದರು ಹಿಂದೆ ಮಡಿಕೆಯನ್ನು ಬಳಸಿ ಅಡುಗೆ ಮಾಡುತ್ತಿದ್ದರು. ಕೆಲವು ಸಾರಿ ಮಡಿಕೆ ರಂಧ್ರವಾಗಿ ಸೋರಿಕೆಯು ಆಗುತ್ತಿತ್ತು. ನಂತರದ ದಿನಗಳಲ್ಲಿ ಕಂಚಿನ ಪಾತ್ರೆಯಿಂದ ಅಡುಗೆಮಾಡುತ್ತಿದ್ದರು. ಇತ್ತೀಚೆಗೆ ಸ್ಟೀಲ್ ಪಾತ್ರೆಗಳ ಬಳಕೆ ಹೆಚ್ಚಾಗಿವೆ. ಅಲ್ಲದೆ ವಿದ್ಯುತ್ತಿನ ವಸ್ತುಗಳ ಬಳಕೆಯು ಹೆಚ್ಚಾಗುತ್ತಿವೆ. ಉದಾ: ಮಿಕ್ಸಿ, ಗ್ರೈಂಡರ್, ಪ್ಯಾನ್, ದೂರದರ್ಶನ ಇನ್ನು ಮುಂತಾದವುಗಳ ಜೊತೆಗೆ ಗ್ಯಾಸ್‌ಸ್ಟವ್ ಬಳಕೆಯಾಗುತ್ತಿದೆ. ಇಲ್ಲಿನ ಜನರ ಉಡುಗೆ-ತೊಡುಗೆಗಳಲ್ಲಿ, ಅಡುಗೆ ಮಾಡುವ ವಿಧಾನದಲ್ಲಿ ಕೆಲವು ಬದಲಾವಣೆಗಳಾದವು.

ಯಳಂದೂರಿನ ಹೃದಯ ಭಾಗದಲ್ಲೇ ಅಂದಿನಿಂದ ಇಂದಿನವರೆಗೂ ಸಂತೆ ಮುನ್ನಡೆದುಕೊಂಡು ಬರುತ್ತಿದೆ. ಬದಲಾದ ಸಂದರ್ಭದಲ್ಲಿ ಈ ಸಂತೆಯ ವ್ಯಾಪಾರದ ಚಟುವಟಿಕೆಗಳಲ್ಲೂ ಕೂಡ ಅನೇಕ ವಸ್ತುವಿನಲ್ಲಿರಬಹುದು ಅಥವಾ ವಸ್ತುವಿನ ಪ್ರಮಾಣ ಮತ್ತು ದರಲ್ಲಿರಬಹುದು. ಇವೆಲ್ಲ ಕಾಲಕ್ಕನುಗುಣವಾಗಿ ಆಗುವ ಸ್ಥಿತ್ಯಂತರಗಳು.

ಹೀಗೆ ಸಾಮಾಜಿಕ ಪ್ರಜ್ಞೆ, ಆರ್ಥಿಕ ಪ್ರಜ್ಞೆ, ಧಾರ್ಮಿಕ ಪ್ರಜ್ಞೆ, ಶೈಕ್ಷಣಿಕ ಪ್ರಜ್ಞೆ ಮತ್ತು ರಾಜಕೀಯ ಪ್ರಜ್ಞೆಗಳು ಈ ಊರಿನ ಜನರಲ್ಲಿ ಇತ್ತೀಚೆಗೆ ಹೆಚ್ಚುತ್ತಿವೆ. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಾಲಾಕಾಲೇಜುಗಳು, ವಿದ್ಯಾರ್ಥಿನಿಲಯಗಳು ಸ್ಥಾಪನೆಯಾಗಿವೆ. ಹೆರಿಗೆ ಆಸ್ಪತ್ರೆ, ಪಶುವೈದ್ಯ ಆಸ್ಪತ್ರೆ, ಅನೇಕ ವೃತ್ತಿಪರ ತರಬೇತಿ ಕೇಂದ್ರಗಳು, ದೂರ ಸಂಪರ್ಕ ಇಲಾಖೆ, ಆರಕ್ಷಕ ಠಾಣೆ, ಕಂಪ್ಯೂಟರ್ ಕೇಂದ್ರಗಳು ಸ್ಥಾಪನೆಯಾಗಿವೆ. ಮಲೆಯ ಮಹದೇಶ್ವರ ಮತ್ತು ಬಿಳಿಗಿರಿರಂಗನ ಯಾತ್ರಾ ಕೇಂದ್ರಗಳಿಗೆ ಹೋಗುವ ನೂರಾರು ಭಕ್ತರಿಗೆ ಯಳಂದೂರು ಆಶ್ರಯ ನೆಲೆಯಾಗಿದ್ದು, ಈ ಗ್ರಾಮದ ಮೂಲಕ ಸರ್ಕಾರಿ ಮತ್ತು ಖಾಸಗಿ ವಾಹನಗಳಲ್ಲಿ ಪ್ರಯಾಣ ಮಾಡುವುದಕ್ಕೆ ವ್ಯವಸ್ಥೆ ಮಾಡಲಾಗಿದೆ. ಹೀಗೆ ಯಾವುದೇ ಒಂದು ಊರು ಆಧುನಿಕ ಸಂದರ್ಭಕ್ಕೆ ತಕ್ಕ ಹಾಗೆ ಬದಲಾವಣೆ ಹೊಂದುವಂತೆ ಯಳಂದೂರು ಕೂಡ ತನ್ನ ಬದಲಾವಣೆಯ ಹಾದಿಯನ್ನು ಹಿಡಿದು ಅಂದಿನಿಂದ ಇಂದಿನವರೆಗೆ ನೂರಾರು ವಿಧದಲ್ಲಿ ಬದಲಾವಣೆಗೆ ತೆರೆದುಕೊಂಡಿದೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ ಎಂದು ಹೇಳಬಹುದು.

# ಉಪಸಂಹಾರ

ಮೌಖಿಕ ರೂಪದ ಜಾನಪದ ಜನತೆಯ ಪ್ರತಿಬಿಂಬವಾಗಿದೆ. ಆ ಜನರ ಜೀವನ ಪದ್ಧತಿ, ಆಚಾರ, ವಿಚಾರ, ನಂಬಿಕೆ, ಸಂಪ್ರದಾಯ, ಜನನ, ಮರಣದ ವಿಚಾರವನ್ನು ಇದರಿಂದ ತಿಳಿಯಬಹುದು. ಮಾನವನ ಬದುಕಿನ ಲಕ್ಷಾಂತರ ವರ್ಷಗಳ ಅವಧಿಯಲ್ಲಿ ನಾಗರಿಕತೆ ವಿಕಸಿಸುತ್ತಾ ಬಂದಂತೆ, ಜಾನಪದವೂ ಮರೆಯಾಗುತ್ತಾ ಬಂದಿದೆ.

ಈ ಕಾರಣದಿಂದಲೇ ನಿರ್ದಿಷ್ಟ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಅತ್ಯಂತ ಸೂಕ್ಷ್ಮವಾಗಿ ಅಲ್ಲಿಯ ವೈವಿಧ್ಯಮಯ ವೈಶಿಷ್ಟ್ಯಗಳನ್ನು ಅಧ್ಯಯನ ಮಾಡುವುದರ ಮೂಲಕ ಅಲ್ಲಿಯದೇ ಆದ ಆಚಾರ-ವಿಚಾರವನ್ನು ಗ್ರಹಿಸುವ ಅವಕಾಶ ಸಿಗುತ್ತದೆ. ಈ ಹಿನ್ನಲೆಯಲ್ಲಿ ಯಳಂದೂರು ಜಾನಪದ ಅಧ್ಯಯನಕ್ಕೆ ವಿಶಿಷ್ಟ ಸಾಮಗ್ರಿಯನ್ನೊದಗಿಸಿದೆ. ಇಲ್ಲಿಯ ಜಾನಪದ ಅಧ್ಯಯನವನ್ನು ಆರು (೬) ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲಾಗಿದೆ. ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಜಾನಪದ ಒಂದು ಜ್ಞಾನಕ್ಷೇತ್ರ ಇದರಲ್ಲಿ ಜಾನಪದದ ಆಕರಗಳನ್ನು ಸಂಗ್ರಹಿಸುವ ಜೊತೆಗೆ ಅದನ್ನು ಉಳಿಸಿ ಬೆಳೆಸಬೇಕೆಂಬ ವಿಚಾರವನ್ನು ವಿವೇಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಯಳಂದೂರಿನ ಭೌಗೋಳಿಕ ಹಿನ್ನಲೆಯಿದೆ. ಇಲ್ಲಿ ಯಳಂದೂರ ಭೌಗೋಳಿಕವಾಗಿ ಚಿಕ್ಕದಾಗಿದ್ದರೂ ಸಾಂಸ್ಕೃತಿಕವಾಗಿ ವಿಸ್ತಾರವಾದದ್ದೆ. ಇದು ಹಿಂದೆ ಕೆರೆಕಟ್ಟೆಗಳಿಂದ ಆವೃತವಾಗಿ ನೀರಾವರಿಗೆ ತುಂಬಾ ಪ್ರಸಿದ್ಧವಾಗಿತ್ತು. ಇಲ್ಲಿ ಪ್ರಸಿದ್ಧ ದೇವಾಲಯಗಳ ವಿಚಾರದೊಂದಿಗೆ ಸುವರ್ಣಾವತಿ ಹೊಳೆ ಎಲ್ಲಿ ಹುಟ್ಟಿ ಎಲ್ಲಿಗೆ ಸೇರುತ್ತದೆ ಎಂಬುದನ್ನು ತಿಳಿಯಬಹುದು. ಈ ನದಿಯನ್ನು 'ಜೀವನದಿ' ಎಂತಲೂ 'ಮೃತನದಿ' ಎಂತಲೂ ಕರೆಯಲು ಕಾರಣವನ್ನು ತಿಳಿದುಕೊಳ್ಳಬಹುದು. ಈ ಬಯಲಿನ ಬೆಳೆಗೆ ಹೇಗೆ ಜೀವನದಿಯಾಗಿ ಆಶ್ರಯ ನೀಡಿದೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಯಳಂದೂರು ಪದದ ನಿಷ್ಪತ್ತಿ ಮತ್ತು ಸ್ಥಳನಾಮದ ಪರಿಚಯವಿದೆ. ಇಲ್ಲಿ ಜೈನ ಮುನಿಯರಲ್ಲಿ ಪ್ರಸಿದ್ಧನಾದ ಬಾಲಚಂದ್ರಮುನಿಯ ಹೆಸರೆ ಯಳಂದೂರಿನ ಹೆಸರಾಗಿತ್ತು ಎಂಬುದನ್ನು ತಿಳಿಸುವುದರ ಜೊತೆಗೆ ಯಳಂದೂರಿನ ಇತಿಹಾಸ, ಇಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳು ಮತ್ತು ಅವರ ಕೊಡುಗೆಗಳಾದ ಶಾಸನಗಳ ವಿಚಾರವನ್ನು ತಿಳಿಸಲಾಗಿದೆ. 'ದೇವನೊಬ್ಬ ನಾಮ ಹಲವು' ಎಂಬಂತೆ ಯುಗ ಯುಗಾಂತರದಲ್ಲಿ ದೇವರು ಹಲವು ನಾಮಗಳಿಂದ ಹುಟ್ಟಿದ ವಿಚಾರವಿದೆ.

ಅಧ್ಯಾಯ ನಾಲ್ಕರಲ್ಲಿ ಯಳಂದೂರಿನ ಮೌಖಿಕ ಜಾನಪದ ಇಲ್ಲಿ ಈ ಊರಿನ ಜನರು ಹಿಂದಿನ ಜಾನಪದ ಸಾಹಿತ್ಯವನ್ನು ಹೇಗೆ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ ಎಂಬುದನ್ನು ವಿವೇಚಿಸಲಾಗಿದೆ. ಅದಕ್ಕೆ ಉದಾಹರಣೆಯಾಗಿ ಜನಪದ ಹಾಡು, ಕಥೆ, ಗಾದೆ, ಒಗಟು, ಸೋಬಾನೆ ಪದಗಳನ್ನು ಕೊಡಲಾಗಿದೆ. ಕನ್ನಡ ನಾಡಿನ ಜನರು ಹೇಗೆ ಪರಿಣಿತರಾಗಿದ್ದರು ಎಂಬುದನ್ನು ಮಾರ್ಗಕಾರ ಹೇಳುವಾಗ 'ನಿಜದಿಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದು ತಿಳಿಸಿದ್ದಾನೆ. ಅದರಂತೆ ಈ ಭಾಗದ ಜನರಿಗೆ ಜಾನಪದ ಸಾಹಿತ್ಯದ ಅರಿವಿತ್ತು ಎಂಬುದನ್ನು ಇಲ್ಲಿ ವಿವೇಚಿಸಲಾಗದೆ.

ಅಧ್ಯಾಯ ಐದರಲ್ಲಿ ಯಳಂದೂರಿನ ಆಚಾರ ಮತ್ತು ಸಂಪ್ರದಾಯ– ಇಲ್ಲಿನ ಜನರ ಹುಟ್ಟು– ಸಾವು, ಮದುವೆ, ಮುಂಜಿ, ಹಬ್ಬಗಳ ಆಚರಣೆಗಳು. ನಾಡಹಬ್ಬದ ವಿಚಾರ ಮತ್ತು ದೇವಾಲಯಗಳ ಪರಿಚಯ ಮತ್ತು ಸಂತೆ ಹಾಗೂ ಇಲ್ಲಿನ ವ್ಯಾಪಾರ ಹಾಗೆಯೇ ಯಳಂದೂರಿನ ಕ್ರೀಡೆಗಳು. ಪ್ರಸೂತಿಯಾದ ಜಲ್ಲೆ ಸಿದ್ದಮ್ಮನ ವಿಚಾರ. ಹಿಂದೆ ಮನೆಗಳಿಗೆ ಬಳಸುತ್ತಿದ್ದ ವಸ್ತುಗಳು ಮತ್ತು ಕೃಷಿಗೆ ಬಳಸುವ ವಸ್ತುಗಳ ವಿಚಾರವನ್ನು ವಿವೇಚಿಸಲಾಗಿದೆ. ಅಲ್ಲದೆ ಹಿಂದೆ ಮಕ್ಕಳು ಯಾವ ಯಾವ ರೀತಿ ಆಟವನ್ನು ಆಡಿ ಸಂತೋಷ ಪಡುತ್ತಿದ್ದರು ಎಂಬುದನ್ನು ತಿಳಿಸಿ ನಾಗರಿಕತೆಯಿಂದ ಅವೆಲ್ಲವೂ ಮರೆಮಾಚುತ್ತಿರುವ ವಿಚಾರವನ್ನು ವಿವೇಚಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಜನಪದರ ಆಚಾರ–ವಿಚಾರಗಳು ಬದಲಾದ ಬಗ್ಗೆ ತಿಳಿಸುವುದರ ಜೊತೆಗೆ ಉಪಸಂಹಾರ, ಗ್ರಂಥ ಸೂಚಿ, ವಕ್ತೃಸೂಚಿಗಳನ್ನು ನೀಡಲಾಗಿದೆ. ಇದರ ಕೊನೆಯಲ್ಲಿ ಯಳಂದೂರು ತಾಲ್ಲೂಕಿನ ನಕ್ಷೆಯನ್ನು ಕೊಡಲಾಗಿದೆ.

## ಗ್ರಂಥಸೂಚಿ


೧. ಕೆಂಪೇಗೌಡ.ಕೆ (ಡಾ.) : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು.

೨. ಚಂದ್ರು ಕಾಳೇನಹಳ್ಳಿ (ಡಾ.) : ಸೋಲಿಗ ಸಂಸ್ಕೃತಿ – ೧೯೯೩, ಕನ್ನಡ ಸಾಹತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು.

೩. ನಂಜಯ್ಯ (ಡಾ.) ಹೊಂಗನೂರು : ಜಾನಪದ ಸಿರಿ –೨೦೦೩, ಪ್ರಸನ್ನ ಪ್ರಕಾಶನ, ಹೊಂಗನೂರು

೪. ನಂಜುಂಡಪ್ಪ ಎಂ. (ಡಾ.), (ಸಂ.) ಮಲೆಯೂರು ಗುರುಸ್ವಾಮಿ (ಪ್ರೊ.) : ಸುವರ್ಣ ಸಿರಿ ೨೦೦೩, ರಮ್ಯ ಮುದ್ರಣ, ಬೆಂಗಳೂರು.

೫. ರೈಸ್.ಬಿ.ಎಲ್. : ಎಪಿಗ್ರಾಫಿಯಾ ಕರ್ನಾಟಕ, ಸಂಪುಟ–೪, ೧೯೭೫ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬. ಲೀಲಾ ಅಪ್ಪಾಜಿ : ಬಿಳಿಗಿರಿ ರಂಗನ ಬೆಟ್ಟ ಒಂದು ಸಾಂಸ್ಕೃತಿಕ ಅಧ್ಯಯನ ೨೦೦೫, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭ ಸಿದ್ಧಲಿಂಗಯ್ಯ (ಡಾ.) : ಗ್ರಾಮದೇವತೆಗಳು, ಅಂಕಿತ ಪುಸ್ತಕ, ಬೆಂಗಳೂರು.

೮. ಸರೋಜಿನಿ ಮಹಿಷಿ : ಕರ್ನಾಟಕದ ಕವಯಿತ್ರಿಯರು –೧೯೬೫, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

## ವಕ್ತೃ ವಿವರ

| ಹೆಸರು | ವಯಸ್ಸು | ಜಾತಿ | ವೃತ್ತಿ |
|---|---|---|---|
| ಚಂದ್ರಮೌಳಿ | ೪೨ | ಬ್ರಾಹ್ಮಣ | ಅರ್ಚಕರು |
| ಚಂದ್ರಶೇಖರ | ೪೨ | ಹರಿಜನ | ರೈತ |
| ದುಗ್ಗಹಟ್ಟಿ ವೀರಭದ್ರಪ್ಪ | ೭೬ | ಲಿಂಗಾಯಿತ | ಮುಖ್ಯಸ್ಥರು |
| ನಾಗರತ್ನಮ್ಮ | ೫೦ | ನಾಯಕ | ಮನೆಕೆಲಸ |
| ಪುಟ್ಟನಂಜಮ್ಮ | ៦೫ | ಹರಿಜನ | ಮನೆಕೆಲಸ |
| ಪುಷ್ಪ | ೨೫ | ಹರಿಜನ | ವಿದ್ಯಾರ್ಥಿನಿ |
| ಮಹದೇವಸ್ವಾಮಿ | ೪೫ | ಉಪ್ಪಾರ | ಗುಮಾಸ್ತರು |
| ಸುಬ್ರಮಣ್ಯ | ೩೫ | ಬ್ರಾಹ್ಮಣ | ಅರ್ಚಕರು |
| ಶೃತಿ | ೧೮ | ನಾಯಕ | ವಿದ್ಯಾರ್ಥಿನಿ |
| ಶಿವಣ್ಣ | ೪೨ | ಹರಿಜನ | ಉಪಾಧ್ಯಕ್ಷರು |

